# ಅಕ್ಕಮಹಾದೇವಿ ವಚನಗಳಲ್ಲಿ ಸಂವೇದನೆಯ ಸ್ವರೂಪ

(ಕನ್ನಡ ಎಂ.ಫಿಲ್. ಪದವಿಗಾಗಿ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸುತ್ತಿರುವ ನಿಬಂಧ)

ಸಂಶೋಧಕರು

ರೂಪ. ಹೆಚ್.ಸಿ.



ಮಾರ್ಗದರ್ಶಕರು

ಡಾ॥. ಸಿ.ಜಿ. ಉಪಾದೇವಿ

ಕನ್ನಡ ಪ್ರಾಧ್ಯಾಪಕರು, ಕನ್ನಡ ವಿಭಾಗ

ವಿದ್ಯೋದಯ ಪ್ರಥಮ ದರ್ಜೆ ಕಾಲೇಜು, ಟಿ.ನರಸೀಪುರ



ಕರ್ನಾಟಕ ಸಂಘ (ರಿ), ಮಂಡ್ಯ.

ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

೨೦೦೭-೨೦೦೮

# ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ೨೦೦೭-೦೮ ನೇ ಸಾಲಿಗೆ ಕನ್ನಡ ಎಂ.ಫಿಲ್. ಪದವಿಗಾಗಿ **"ಅಕ್ಕಮಹಾದೇವಿ ವಚನಗಳಲ್ಲಿ ಸಂವೇದನೆಯ ಸ್ವರೂಪ"** ಎಂಬ ಶೀರ್ಷಿಕೆಯ ನಿಬಂಧವನ್ನು ಸಿದ್ದಪಡಿಸಿರುತ್ತಾರೆ. ಈ ನಿಬಂಧವಾಗಲಿ, ಅಧ್ಯಾಯವಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಲ್ಪಟ್ಟಿಲ್ಲ. ಈ ಸಂಶೋಧನಾ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಗೆ ಸಂಬಂಧಿಸಿದಂತೆ ಮೌಲ್ಯ ಸ್ವೀಕಾರಕ್ಕಾಗಿ ಒಪ್ಪಿಸುತ್ತಿರುವುದಕ್ಕೆ ನನ್ನ ಒಪ್ಪಿಗೆ ಇದೆ.

ಮಾರ್ಗದರ್ಶಕರ ಸಹಿ

ಸ್ಥಳ : ಟಿ.ನರಸೀಪುರ

ದಿನಾಂಕ : 12.09.2008

(ಡಾ॥. ಸಿ.ಜಿ. ಉಷಾದೇವಿ)
ಕನ್ನಡ ಪ್ರಾಧ್ಯಾಪಕರು, ಕನ್ನಡ ವಿಭಾಗ
ವಿದ್ಯೋದಯ ಪ್ರಥಮ ದರ್ಜೆ ಕಾಲೇಜು,
ಟಿ.ನರಸೀಪುರ

## ಅಭ್ಯರ್ಥಿಯ ಘೋಷಣಾ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ೨೦೦೭-೦೮ ನೇ ಸಾಲಿಗೆ ಕನ್ನಡ ಎಂ.ಫಿಲ್.ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಅಕ್ಕಮಹಾದೇವಿ ವಚನಗಳಲ್ಲಿ ಸಂವೇದನೆಯ ಸ್ವರೂಪ "** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು **ಡಾ॥. ಸಿ.ಜಿ. ಉಷಾದೇವಿ** ಕನ್ನಡ ಪ್ರಾಧ್ಯಾಪಕರು, ಕನ್ನಡ ವಿಭಾಗ ವಿದ್ಯೋದಯ ಪ್ರಥಮ ದರ್ಜೆ ಕಾಲೇಜು, ಟಿ.ನರಸೀಪುರ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ, ನಿಬಂಧದ ಅಧ್ಯಾಯವನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಕನ್ನಡ ವಿಶ್ವವಿದ್ಯಾಲಯವು ನೀಡುವ ಎಂ.ಫಿಲ್. ಪದವಿಗಾಗಿ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಸ್ಥಳ : ಮಂಡ್ಯ

ದಿನಾಂಕ : 12.9.2008

ಸಂಶೋಧನಾ ವಿದ್ಯಾರ್ಥಿ

# ಪರಿವಿಡಿ

# ಪ್ರಸ್ತಾವನೆ

೧೨ನೇ ಶತಮಾನದ ವಚನ ಸಾಹಿತ್ಯದಲ್ಲಿ ಒಂದು ದೊಡ್ಡ ಕ್ರಾಂತಿಯಾದುದನ್ನು ನಾವು ಕಾಣಬಹುದು. ಭಕ್ತಿ, ಕ್ರಾಂತಿ, ಕಾಯಕ ದೃಢತೆಯಾದಿಯಲ್ಲಿ ಬಂದಂತಹ, ಬಸವಣ್ಣ, ಅಲ್ಲಮ್ಮಪ್ರಭು, ಸಿದ್ಧರಾಮ ಹಾಗೂ ವಿರಾಗಿಣಿಯಾದ ಅಕ್ಕಮಹಾದೇವಿ ವೈಯಕ್ತಿಕ ಹಾಗೂ ಸಾಮಾಜಿಕ ಹೋರಾಟಗಳ ಮೂಲಕ ಗಮನಾರ್ಹಳಾಗಿ ವಚನ ಸಾಹಿತ್ಯದಲ್ಲಿ ಕಂಡು ಬರುತ್ತಾಳೆ.

ಅಂದು ವೈದಿಕ ವರ್ಣಾಶ್ರಮ ವ್ಯವಸ್ಥೆ ಮತ್ತು ಪಿತೃಪ್ರಧಾನ ಕುಟುಂಬ ಪದ್ಧತಿಗಳಿಂದಾಗಿ ಸಮಾಜದಲ್ಲಿ ಸ್ತ್ರೀಗೆ ಉಂಟಾಗಿದ ಅಸಮಾನತೆ, ಶೋಷಣೆಗಳನ್ನು ಕಂಡ ಶರಣರು ವ್ಯಕ್ತಿ ಸ್ವಾತಂತ್ರ, ಸಮಾನತೆ ಹಾಗೂ ಬರವಣಿಗೆ ಅಭಿವ್ಯಕ್ತಿ ಸ್ವಾತಂತ್ರದ ಹಕ್ಕನ್ನು ಈ ವಚನ ಸಾಹಿತ್ಯದ ಎಲ್ಲಾ ವರ್ಗದ ಮಹಿಳೆಯರಿಗೆ ಅವಕಾಶ ಕಲ್ಪಸಿಕೊಟ್ಟಿದ್ದು, ಈ ಹಿನ್ನಲೆಯಲ್ಲಿ ಕಂಡುಬಂದಂತಹ ಕೆಲವು ಮಹಿಳೆಯರನ್ನು ಕಾಣಬಹುದು. ನೀಲಾಂಬಿಕೆ, ಗಂಗಾಂಬಿಕೆ, ಆಯ್ದಕ್ಕಿ ಲಕ್ಕಮ್ಮ, ರಾಯಮ್ಮ, ಗೊಗ್ಗವೆ, ರೇವಮ್ಮ, ಅಕ್ಕಮ್ಮ ಹೀಗೆ ಅನೇಕ ವಚನಕಾರ್ತಿಯರನ್ನು ಕಾಣಬಹುದು. ಹೆಣ್ಣು ಪುರುಷರಂತೆ ಮಾತಾಡಬಲ್ಲಳು, ಬರೆಯಬಲ್ಲಳು, ಯೋಚಿಸಬಲ್ಲಳು ಎಂಬುದನ್ನು ಇವರು ಮೊದಲಿಗೆ ಜಗತ್ತಿಗೆ ತೋರಿಸಿಕೊಟ್ಟಿದ್ದಾರೆ. ಅವರ ವಚನಗಳಲ್ಲಿರುವ ಜ್ಞಾನ, ಆಧ್ಯಾತ್ಮ, ವೈಚಾರಿಕತೆ, ಬೆರಗು ಹುಟ್ಟಿಸುವಂತದ್ದು. ಅಂದಿನ ವಿಶಿಷ್ಠತೆಯೆಂದರೆ ಕೆಳವರ್ಗದ ಮಹಿಳೆಯರು ಧ್ವನಿ ತೋರಿದ್ದು, ಇತಿಹಾಸದ ಘಟ್ಟದಲ್ಲಿ ಹೆಣ್ಣು ಮಾತಾಡಿದ್ದೆ ಅಪರೂಪ. ಹೀಗಿದ್ದಾಗ ನೂರಾರು ಜನರ ಧ್ವನಿ ಒಂದೇ ಘಟ್ಟದಲ್ಲಿ ಕೇಳಿಬಂದುದ್ದು ಒಂದು ವಿಸ್ಮಯಕಾರಿ ಎಂದು ಹೇಳಬಹುದಾಗಿದೆ.

ಹೆಣ್ಣು ಮಾಯೆ, ಮೋಹಿನಿ ಎಂದು ತಿರಸ್ಕಾರದಿಂದ ಕಾಣುವ ಸಮಾಜಕ್ಕೆ ಹೆಣ್ಣು ಮಹಾವಿರಾಗಿಣಿಯಾಗಬಲ್ಲ ಆತ್ಮಸತ್ವದ ಸಂಕೇತ ಎನ್ನುವುದನ್ನು ಮಹಿಳೆಯನ್ನು ಮಾಯೆಯೆಂದು ಕಡೆಗಣಿಸುವವರಿಗೆ ಆಕೆ ಮಹಾದೇವಿಯಾಗುವ ಶಕ್ತಿಸ್ವರೂಪಿಣಿಯನ್ನೆವುದನ್ನು ಬದುಕಿ ತೋರಿದ ನಿಜಶಕ್ತಿಯೇ ಅಕ್ಕಮಹಾದೇವಿಯಾಗಿದ್ದಾಳೆ. ಅಕ್ಕಮಹಾದೇವಿ ಬದುಕೇ ರಮ್ಯವಾದುದ್ದು, ಒಡೆಯನಾದ ಗಂಡನನ್ನು ಏಕಕಾಲದಲ್ಲಿ ತಿರಸ್ಕರಿಸಿದ್ದು ಮಹತ್ವಪೂರ್ಣವಾಗಿದೆ. ಗಂಡನೇ ದೇವರು ಎಂದು ಪೂಜಿಸುತ್ತಿದ್ದವರಿಗೆ ದೇವರೇ ಗಂಡನಾಗಬಲ್ಲನೆಂದು ಹೇಳಿದವಳು ಈ ಅಕ್ಕಮಹಾದೇವಿ. ಗಂಡಗಂಡರನ್ನೆಲ್ಲ ಹೆಂಡಹೆಂಡಿರಾಗಿ ಆಳುವ ಜಗದೇಕ ಪುರುಷ ಪರಮಾತ್ಮನನ್ನೇ ಪತಿಯಾನ್ನಾಗಿಸಿಕೊಂಡು ಪರಮಸುಖಿಯಾಗಬಲ್ಲ ವಿನೂತನ ಪಥವನ್ನು ತೋರಿದ ಸಶಕ್ತಿಯಾಗಿದ್ದಾಳೆ. ಈ ಹಿನ್ನಲೆಯಲ್ಲಿ ಅಕ್ಕಮಹಾದೇವಿ ಒಬ್ಬ ವ್ಯಕ್ತಿಯಾಗದೇ ನಿಜ ಶಕ್ತಿಯ ಸಾಕಾರವಾಗಿ ಗೋಚರಿಸುತ್ತಾಳೆ.

ಹೆಣ್ಣಾಗಿ ಹುಟ್ಟಿ ಅನುಭವಿಯಾಗಿ, ವಿರಕ್ತಿಯಾಗಿ ಬಾಳಿದ ಅಕ್ಕನ ಜೀವನವೊಂದು ಹೋರಾಟ ಸಂದಿಗ್ಧತೆಗಳ ಸರಮಾಲೆ. ವಿವಾಹ ಪಾತಿವ್ರತ್ಯ ಪತಿದೈವ ಇತ್ಯಾದಿ ಸಮಾಜ ನಿರ್ಮಿತಿ ಕಟ್ಟೆಳೆಗಳಿಗೆ ಬದ್ಧಳಾಗುವುದೇ ಸ್ತ್ರೀಧರ್ಮವೆನ್ನಲಾದ ಕಾಲದಲ್ಲಿ ತನ್ನ ಗುರಿ ಸಾಧನೆಗಾಗಿ ಸಾಂಪ್ರಾದಾಯಿಕ ಸ್ತ್ರೀಧರ್ಮವನ್ನು ಮೀರಿದ ಮಹಾದೇವಿ ಅಕ್ಕ ಅನಂತ ಕಷ್ಟಗಳನ್ನು ಸಹಿಸಿದ್ದಾಳೆ.

## ಅಧ್ಯಾಯ - 1

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಇಪ್ಪತ್ತೊಂದನೇ ಶತಮಾನದಲ್ಲಿ ಸ್ತ್ರೀವಾದಿಗಳು ೧೨ನೇ ಶತಮಾನದ ಅಕ್ಕಮಹಾದೇವಿಯಿಂದ ಪ್ರಭಾವಿತರಾಗಿದ್ದಾರೆ. ಎಂದರೆ ಅಕ್ಕಮಹಾದೇವಿಯ ವ್ಯಕ್ತಿತ್ವದ ಹಿರಿಮೆ ಎಂತಹದ್ದೆನ್ನುವ ಅರಿವು ನಮಗಾಗುತ್ತದೆ. ವಚನ ಸಾಹಿತ್ಯದ ಪ್ರಮುಖ ವಚನಗಾರ್ತಿ ಅಕ್ಕಮಹಾದೇವಿ ಸಾಮಾಜಿಕ ವ್ಯವಸ್ಥೆ ಮತ್ತು ರಾಜ ಪ್ರಭುತ್ವಗಳೆರಡನ್ನು ಏಕಕಾಲಕ್ಕೆ ಧಿಕ್ಕರಿಸಿ ನಿಂತವಳು. ಜೀವನವನ್ನು ಹೋರಾಟದಲ್ಲಿ ಕಳೆದವಳು. ವಚನ ಸಾಹಿತ್ಯಕ್ಕೆ ತನ್ನದೇ ಆದ ಕೊಡುಗೆಗಳನ್ನು ಕೊಟ್ಟು ಕನ್ನಡದ ಪ್ರಥಮ ಶ್ರೇಷ್ಠ ಕವಯತ್ರಿಯಾದವಳು. ಹೆಣ್ಣುತನಕ್ಕೆ ಒಂದು ಗೌರವ ಭಾವನೆಯನ್ನು ತಂದು ಕೊಟ್ಟು ಬಸವ ಅಲ್ಲಮ, ಮೊದಲಾದವರಿಂದ ಸನ್ಮಾನಿತಳಾದವಳು.

ಅಕ್ಕಮಹಾದೇವಿ ಸಂಸಾರ ತೊರೆದು ಏಕಾಂಗಿಯಾಗಿ ಕಲ್ಯಾಣ, ಅನುಭವ ಮಂಟಪ ಹಾಗೂ ಶ್ರೀಶೈಲದವರೆವಿಗೂ ನಡೆದ ಹಾದಿಯಲ್ಲಿ ಅನೇಕ ರೀತಿಯ ಸಂವೇದನೆಯನ್ನ ವಚನ ಸಾಹಿತ್ಯದಲ್ಲಿ ಕಂಡಾಗ, ಇಂದಿನ ಪ್ರಜ್ಞಾವಂತ ಮಹಿಳೆಯರು ಆಲೋಚಿಸುತ್ತಿರುವ, ಚಿಂತಿಸುತ್ತಿರುವ ವಿಚಾರಧಾರೆಗಳನ್ನು ಅಂದು ಅಕ್ಕ ಮೊದಲಿಗೆ ಮಾಡಿದ್ದಳು ಎನ್ನುವುದು ಅವಳ ವಚನಗಳಿಂದ ತಿಳಿದು ಬರುತ್ತದೆ.

ಅಕ್ಕನ ವಚನಗಳಲ್ಲಿ ಕಂಡುಬರುವಂತಹ ಮೌಲ್ಯಧಾರಿತ ಅಂಶಗಳನ್ನ ಗುರುತಿಸಬಹುದು. ಇಲ್ಲಿ ಹೆಣ್ಣು- ಗಂಡಿನಲ್ಲಿರುವ ಭೇದವನ್ನ ಗುರುತಿಸುತ್ತಾ ಅಸಮಾನತೆಯ ಬಗ್ಗೆ ಯೋಚಿಸುವುದು.

'ಹೆಣ್ಣಿಗೆ ಗಂಡು ಮಾಯೆ
ಗಂಡಿಗೆ ಹೆಣ್ಣು ಮಾಯೆ'

ಈ ಮಾತುಗಳಲ್ಲಿ ಹೆಣ್ಣು ಗಂಡಿನ ಪಾಲಿಗೆ ಮಾಯೆಯಾಗುವುದಾದರೆ ಗಂಡು ಹೆಣ್ಣಿನ ಪಾಲಿಗೆ ಯಾಕೆ ಮಾಯೆ ಅಲ್ಲ? ಎಂದು ಪ್ರಶ್ನಿಸುವ ದೃಷ್ಟಿಕೋನ ಮಹಿಳಾ ಪರವಾದ ಒಂದು ಪ್ರಕ್ರಿಯೆಯಾಗಿದೆ. ಹಾಗೆಯೇ ಕಟ್ಟಿಕೊಂಡ ಹೆಂಡತಿಯನ್ನು ಗಂಡ ಆಧ್ಯಾತ್ಮ ಸಾಧನೆಯ ನಡೆಯಿಂದ ಬಿಟ್ಟು ಹೋಗುವುದು 'ವೈರಾಗ್ಯ' ಲಕ್ಷಣವಾಗುವುದಾದರೆ ಕಟ್ಟಿಕೊಂಡ ಗಂಡನನ್ನು ತನ್ನ ಆಧ್ಯಾತ್ಮ ಸಾಧನೆಗಾಗಿ ಹೆಣ್ಣು ಬಿಟ್ಟು ಹೋಗುವುದೂ ವೈರಾಗ್ಯ ಯಾಕೆ ಆಗುವುದಿಲ್ಲ ಎನ್ನುವುದನ್ನು ಆಕೆ ಕೌಶಿಕನನ್ನು ಬಿಟ್ಟು ಹೊರಟ ಸಂದರ್ಭವು ಸಾಂಕೇತಿಸುತ್ತದೆ.

ಅಕ್ಕ ಮದುವೆಯನ್ನು ನಿರಾಕರಿಸಿದವಳಲ್ಲ, ಮದುವೆ ಎಂಬ ವ್ಯವಸ್ಥೆಯನ್ನು ಪ್ರಶ್ನಿಸಿದಳು, ಪ್ರತಿಭಟಿಸಿದಳು ಮದುವೆಯಲ್ಲಿ ಹೆಣ್ಣಿನ ಆಯ್ಕೆಯ ಸ್ವಾತಂತ್ರವನ್ನು ತಿರಸ್ಕರಿಸುವ ಪ್ರವೃತ್ತಿಯನ್ನು

ವಿರೋಧಿಸಿದಳು. ಪ್ರೀತಿ ಪ್ರೇಮ ಎನ್ನುವ ಶಬ್ದ ಆಧುನಿಕ ಜಗತ್ತಿಗೆ ಮಾತ್ರ ಸಿಮೀತವಾದುದ್ದಲ್ಲ ಎಂಬುದನ್ನು ಅಕ್ಕನ ವಚನದಲ್ಲಿ ತಿಳಿಯಬಹುದು. 'ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಿಸಿದೆ ನೋಡಾ' ಎಂಬ ಅವಳ ಉಕ್ತಿಯು ಈ ಮಾತನ್ನು ಸೂಚಿಸುತ್ತದೆ. ತಾನೊಲಿದ ಗಂಡನೊಂದಿಗೆ ತನಗೆ ಒದಗಿದ ವಿರಹ ಹಾಗೂ ಆತನೊಂದಿಗೆ ತಾನು ಒಂದಾಗುವ ಉತ್ಕಟವಾದ ಹಂಬಲದ ಪ್ರಯಾಣದ ಉದ್ದಕ್ಕೂ ಅವಳು ಆಡುವ ಮಾತೆಲ್ಲ ಭಾರತೀಯ ಪ್ರೇಮ ಕಾವ್ಯದ ವಿರಹಗೀತೆಗಳ ಮಾದರಿಗಳಂತಿವೆ. ಅವಳ ವಚನಗಳಲ್ಲಿ ಉತ್ಕಟವಾದ ಶೃಂಗಾರ - ಭಾವದ ಅನೇಕ ಕ್ಷಣಗಳು ದಾಖಲಾಗಿವೆ.

ಅಕ್ಕಮಹಾದೇವಿಯ ವಿಚಾರದಲ್ಲಿ ಸ್ತ್ರೀವಾದಿಗಳು, ಸ್ತ್ರೀಚಿಂತಕರು ಗಮನಿಸಬೇಕಾದ ಅನೇಕ ಮುಖ್ಯ ಸಂಗತಿಗಳಿವೆ. ಅಕ್ಕನನ್ನು ರಾಜ ಎಷ್ಟೇ ಒತ್ತಾಯ ಮಾಡಿದರೂ ಪರಮಾತ್ಮನೆ ನನ್ನ ಗಂಡ ಮಿಕ್ಕಿನ ಗಂಡಸರಿಗೆ ಸಂಬಂಧವಿಲ್ಲ ಎಂದು ಹೇಳುವ ಅಕ್ಕನ ಖಚಿತ ನಿಲುವು ಅಕ್ಕನ ಸಂವೇದನೆಯ ಒಳ ಧ್ವನಿಯನ್ನು ವ್ಯಕ್ತಪಡಿಸಿದೆ. ಆ ರಾಜನ ಪ್ರಭುತ್ವ ಧಿಕ್ಕರಿಸಿ ಹೊರಬಂದವಳು. ಸ್ತ್ರೀಸ್ವಾತಂತ್ರ್ಯ ಯಾರು ಕೊಡುವಂತದಲ್ಲ. ತಾನೇ ಪಡೆದುಕೊಳ್ಳಬೇಕು ಎಂದು ಅಕ್ಕಮಹಾದೇವಿ ಅಂದೆ ಸಿದ್ಧ ಮಾಡಿ ತೋರಿಸಿದಳು.

ಅಕ್ಕನ ವಚನಗಳಲ್ಲಿ ಕಾಣುವ ಸಾಂಸಾರಿಕ ಬದುಕಿನ ಅದಮ್ಯ ಪ್ರೀತಿ, ತನ್ನ ಅಮೂರ್ತ ಪ್ರಿಯಕರನಿಗಾಗಿ ಹಂಬಲಿಸುವ ಉತ್ಕಟತೆ "ಎರೆಯಂತೆ ಕರಕರಗಿ ಮಳಲಂತೆ ಜರಿಜರಿದು, ಪುರುಷಬಾರಾ ಪುರುಷ ರತ್ನವೆ ಬಾರು, ಅಪ್ಪಿದಡೆ ಅಸ್ತಿಗಳು ನುಗ್ಗುನುಸಿಯಾಗಬೇಕು"[೧] ಎನ್ನುವ ವಚನದ ಒಳ ಮಾತುಗಳು, ಅವುಗಳ ಮೂಲಕ ಹೊರಡುವ ನಲ್ಲನ ಬಯಕೆ, ಒಲವಿನ ಆತ್ಮೀಯತೆ, ಕಾಮದಲ್ಲಿ ಏಕತೆ ಈ ಭಾವನಾತ್ಮಕ ಅಂಶವನ್ನು ಅಕ್ಕನಲ್ಲಿ ಗಮನಿಸಬಹುದು. ಲೋಕ ವಿದುರನಾದ ಪತಿ ಬಯಕೆ ಮತ್ತು ನೆಲಕ್ಕೆ ಅಂಟಿಕೊಂಡ ಸಾಂಸಾರಿಕ ಒಲವು, ಸಮಾಜ ನಿರ್ಮಿತ ಚೌಕಟ್ಟಿನೊಳಗಡೆಯೂ ಅಪ್ಯಾಯಮಾನವೆನಿಸುವ ಮನುಷ್ಯ ಸಂಬಂಧಿಗಳ ಹುಡುಗಾಟ ಈ ವೈರುಧ್ಯಗಳನ್ನು ನೋಡಿದಾಗ ಅಕ್ಕನನ್ನು ಅರ್ಥ ಮಾಡಿಕೊಳ್ಳಲು ಹಲವು ಆಯಾಮಗಳ ಅವಶ್ಯಕತೆಯಿರುವುದನ್ನು ಕಾಣಬಹುದು. ಹಲವಾರು ಪ್ರಶ್ನೆಗೊಳಗಾಗಬುಹದಾದ ದಾರಿಯಲ್ಲಿ ನಡೆಯುತ್ತಿರುವ ತಿಳುವಳಿಕೆಯಿದ್ದು, ಅದರಿಂದ ವಿಚಲಿತಳಾಗದೆ ನಡೆಯುವ ಅಕ್ಕನ ಸ್ಥೈರ್ಯವೇ ಅವಳನ್ನು ಹೇಗಾದರೂ ಮಾಡಿ ಅರ್ಥ ಮಾಡಿಕೊಳ್ಳಬೇಕೆಂಬ ಹಟವನ್ನೇ ಓದುಗರಲ್ಲಿ ಹುಟ್ಟಿಸುತ್ತದೆ.

ವೈಜ್ಞಾನಿಕ ವೈಚಾರಿಕ ಯುಗದಲ್ಲಿರುವ ನಮಗೆ ಅಕ್ಕನನ್ನು ವೈಭೀಕರಿಸುವ ಜರೂರಿ ಇಲ್ಲವಾದರೂ ನಮ್ಮ ಇಂದಿನ ವಾಸ್ತವದ ಸವಾಲುಗಳೊಂದಿಗೆ ಮುಖಾಮುಖಿಯಾಗಿಸಬೇಕಾದ ಅನಿವಾರ್ಯತೆ ಇದೆ. ಸ್ತ್ರೀವಾದದ ಪ್ರಕಾರ ನೆಲೆಯೇ ಮಾರಕವೆಂಬಂತೆ ಹಬ್ಬುತ್ತಿರವ ಜಾಗತೀಕರಣದ ಈ ಹೊತ್ತಿನಲ್ಲಿ ಜಾಗತಿಕ ಮಾರುಕಟ್ಟೆಗೆ ವ್ಯಾಪಕ ಸರಕಾಗುತ್ತಿರುವ ಗ್ಲಾಮರಸ್ ಲೋಕ ಅಕ್ಕನ ಅಸ್ಮಿಯತೆಯನ್ನು ಪುನ: ಕಟ್ಟಿಕೊಳ್ಳಬೇಕು. ಪ್ರಾಯಶ: ಅಕ್ಕನ ಬದುಕಿನ ಅನುಸಂಧಾನವೇ ಸ್ತ್ರೀಲೋಕದ ಇಂದಿನ ಬಿಕ್ಕಟ್ಟುಗಳಿಗೆ ಪರಿಹಾರೋಪಾಯವಾಗಬಹುದು.

೧. ಅಕ್ಕಮಹಾದೇವಿ - ಡಾ.ಶಾಂತಇಮ್ರಾಪುರ-ಪುಟ-೧೯೭ (೨೦೦೧)

ಭಕ್ತಿ, ಜ್ಞಾನ, ವೈರಾಗ್ಯ -ಯೋಗ ಸಾಮ್ರಾಜ್ಯದ ಸಾಮ್ರಾಜ್ಞಿಯಾಗಿ ಮೆರೆದ ಮಹಾದೇವಿಯಕ್ಕನ ಬದುಕು ವಾಸ್ತವಿಕ ಸದೃಶವಾದುದು. ಇಂತಹ ವೈಯಕ್ತಿಕ ಅಧ್ಯಯನ ಹೆಚ್ಚು ಸೂಕ್ತವೆನಿಸಿತ್ತು. ನನಗೆ ಅಸಾಮಾನ್ಯವಾದುದ್ದನ್ನು ಬಯಸಿ ವೀರ ವಿರಾಗಿಣಿಯಾದ ಅಕ್ಕಮಹಾದೇವಿಯ ಚರಿತ್ರೆಯಲ್ಲಿ ಮೆರೆದವಳು ಎಂದು ಹೇಳಬಹುದು. ೧೨ನೇ ಶತಮಾನದಿಂದ ಇಂದಿನವರೆಗೂ ಹಲವಾರು ಜನ ಕವಿಗಳು ಅಕ್ಕನ ಬದುಕನ್ನು ಚಿತ್ರಿಸುತ್ತಲೇ ಬಂದಿದ್ದಾರೆ. ಬಹುಶ: ಭಾರತೀಯ ಯಾವ ಭಾಷೆಯ ಸಾಹಿತ್ಯದಲ್ಲೂ ಸ್ತ್ರೀಯೊಬ್ಬಳನ್ನು ಕುರಿತು ಇಷ್ಟೊಂದು ದೊಡ್ಡ ಪ್ರಮಾಣದ ಸಾಹಿತ್ಯ ನಿರ್ಮಾಣವಾಗಿಲ್ಲವೆಂದೇ ಹೇಳಬಹುದು. ದೇಶ-ಭಾಷೆ ಕಾಲಾತೀತವಾದ ಮಹಾದೇವಿಯಕ್ಕನ ವಿಶ್ವಮಾನ್ಯ ವ್ಯಕ್ತಿತ್ವ ಹಾಗೂ ಜೀವನ ಸಂದೇಶ ಕೇವಲ ಕನ್ನಡ ಕವಿಗಳನ್ನಷ್ಟೇ ಅಲ್ಲ. ಸಂಸ್ಕೃತ, ತೆಲಗು, ತಮಿಳು, ಮರಾಠಿ ಭಾಷೆಯ ಕವಿಗಳನ್ನು ಆಕರ್ಷಿಸಿದೆ ಎನ್ನುವುದು ಗಮನಾರ್ಹ ಸಂಗತಿ.

ಅಕ್ಕನ ವಚನ ಸಾಹಿತ್ಯದ ಸೊಬಗನ್ನು ಅರಿಯಲು ಅವಳ ತತ್ವಜ್ಞಾನ, ಧರ್ಮಬೋಧನೆ, ಅವಳ ವಚನಗಳ ಜೊತೆಗೆ ಅವಳಿಂದಲೇ ರಚಿತವಾದ 'ಯೋಗಾಂಗದ ತ್ರಿವಿಧಿ'ಗಳನ್ನು ಇಂದಿನ ಸಮಾಜ ಅರಿತುಕೊಳ್ಳಲು ಪ್ರಯತ್ನಿಸಬೇಕಾಗಿದೆ. ಈ ಹನ್ನೆರಡನೆ ಶತಮಾನದ ಮಧ್ಯಕಾಲದಲ್ಲಿ ಬಾಳಿ ಬದುಕಿದ್ದ ಅಕ್ಕನ-ಭೋಮಂಡಲದ ಅತ್ಯುನ್ನತ ದಿಶೆಯ ತಾರೆ, ಭಕ್ತಳ ಸ್ಥಿತಿಯಿಂದ ಐಕ್ಯಳಾಗಿ ಜೀವನದಲ್ಲಿ ಶರಣಸತಿ-ಲಿಂಗಪತಿ ಎಂಬುದನ್ನು ಸಿದ್ದಮಾಡಿದ ಸಿದ್ದಪುರುಷೆ ಮಹದೇವಿ ಹೆಸರಿನ ಜೊತೆಗೆ ಅಕ್ಕ ಎಂಬುದು ಗೌರವಸೂಚಕವಾಗಿ ಸೇರಿಕೊಂಡ ಪದ. ಅನುಭವ ಮಂಟಪದ ಕಿರಿಯ ಶರಣಿಯಾದರೂ ಎಲ್ಲಾ ಹಿರಿಯ ಶರಣರಿಂದ ಅಕ್ಕನೆಂಬ ಅಭಿದಾನ ಪಡೆದಳು. ೧೨ನೇ ಶತಮಾನದಲ್ಲಿಯೇ ಪುರೋಹಿತ ಶಾಹಿಗಳ ಧರ್ಮಾಂಧ ಆಚರಣೆಗಳ ಒತ್ತಡಗಳಿಂದ ನೊಂದ ಅನೇಕ ಮಹಿಳೆಯರು ಸೇರಿದಂತೆ ತಮಗೆ ಆದ ಅನ್ಯಾಯವನ್ನು ವಚನ ಸಾಹಿತ್ಯದಲ್ಲಿ ಅಕ್ಕ ತೋರಿದ ಧೈರ್ಯ-ಸ್ಥೈರ್ಯಗಳಲ್ಲಿ ಪ್ರತಿಯೊಬ್ಬ ಮಹಿಳೆಯರು ಮನಗಾಣಬಹುದಾಗಿದೆ.

ಇತರ ವಚನಕಾರ್ತಿಯರಿಗಿಂತ ಅಕ್ಕ ಪ್ರಮುಖ ಸ್ಥಾನ ಪಡೆಯಲು ಕಾರಣವೆಂದರೆ ಅವಳ ವ್ಯಕ್ತಿ ವಿಶೇಷತೆಯಿಂದ ಇಂದಿನ ಮಹಿಳಾ ಹೋರಾಟಗಾರ್ತಿಯರಿಗೆ ಹಾಗೂ ಬರಹಗಾರ್ತಿಯರಿಗೆ ಅಕ್ಕ ಹೆಚ್ಚು ಪ್ರಸ್ತುತಳಾಗಿದ್ದಾಳೆ. ಅವಳ ತೀವ್ರವಾದ ಹೋರಾಟ ದಾಸ್ಯ ಸಂಕೋಲೆಯಲ್ಲಿ ಬಂಧಿತರಾದ ಸ್ತ್ರೀಯರಿಗೆ ವಿಚಾರ ಸ್ವಾತಂತ್ರ್ಯವಿದೆಯೆಂಬುದನ್ನು ಕಾರ್ಯ ರೂಪಕ್ಕಿಳಿಸಿ ತೋರಿಸಿದ ಕಾರಣಕ್ಕಾಗಿ, ಜೊತೆಗೆ ತನ್ನಲ್ಲಿಯೂ ಒಂದು ಅದಮ್ಯ ಶಕ್ತಿ ಅಡಗಿದೆ ಎಂಬುದನ್ನು ನಮ್ಮ ಮಹಿಳಾ ಹೋರಾಟಗಾರ್ತಿಯರಲ್ಲಿ ತೋರಿಸಿದಕ್ಕಾಗಿ ಅಕ್ಕ ಎಲ್ಲರ ಮನಸ್ಥಿತಿಯಲ್ಲಿಯೂ ಅಚ್ಚ ಹಸಿರಾಗಿ ಉಳಿದಿದ್ದಾಳೆ.

ಅಕ್ಕನ ವಚನಗಳ ಸಂವೇದನೆಯ ವ್ಯಾಪ್ತಿಯಲ್ಲಿ ಹಲವು ರೀತಿಯ ನೆಲೆಗಳಲ್ಲಿ ಗುರುತಿಸಬಹುದಾಗಿದೆ. ಮೊದಲಿಗೆ ಅವಳ ಬಾಲ್ಯ ಜೀವನ, ಬದುಕು, ಬಾಲ್ಯದಿಂದ ಯೌವ್ವನದ ಬದುಕಿನಲ್ಲಿ ಅಕ್ಕ ಒಂದು ಗುರುತರವಾದ ಬದಲಾವಣೆಯನ್ನು ಕಾಣುತ್ತಾಳೆ. ಸಂಸಾರವನ್ನು ತೊರೆದು

ದಿಗಂಬರತ್ವದಿಂದ ಕಲ್ಯಾಣಕ್ಕೆ ಬಂದು ಅನುಭವ ಮಂಟಪದಲ್ಲಿ ಅಗ್ನಿಪರೀಕ್ಷೆಗೆ ಒಳಗಾಗಿ ತನ್ನ ಸ್ಥಾನವನ್ನು ಶರಣ ಅಂದರೆ ಅಲ್ಲಮ್ಮ ಬಸವಣ್ಣ ಚನ್ನಬಸವಣ್ಣ ಇವರುಗಳು ಕೇಳುವ ಪ್ರಶ್ನೇಗಳಿಗೆ ಉತ್ತರ ಕೊಡುವುದರ ಮುಖಾಂತರ ಉಳಿಸಿಕೊಂಡಿದ್ದು, ನಂತರ ಎಲ್ಲರ ಪ್ರೀತಿಗೆ ಪಾತ್ರಳಾಗಿ ಕೊನೆಗೆ ಅಲ್ಲಮ್ಮನಿಂದ ಶ್ರೀಶೈಲದ ಕದಳಿಯಲ್ಲಿ ಐಕ್ಯವಾಗಲು ಮಾರ್ಗವನ್ನು ಪಡೆಯುತ್ತಾಳೆ.

ಕನ್ನಡ ಸಾಹಿತ್ಯದಲ್ಲಿ ಸಂವೇದನೆಯ ಸ್ವರೂಪವನ್ನು ಈ ರೀತಿಯಲ್ಲಿ ಗುರುತಿಸಿಕೊಳ್ಳಲಾಗಿದೆ. ಯುಗಧರ್ಮಕ್ಕನುಗುಣವಾಗಿ ಅಂಚಿಗೆ ತಳ್ಳಲ್ಪಟ್ಟಿದ್ದ ಮಹಿಳೆ. ಅಲ್ಪಸಂಖ್ಯಾತರಾದ ಮುಸ್ಲಿಂ ಜನಾಂಗ, ದಲಿತರ ಸಂವೇದನೆಗಳನ್ನು ವಿಮರ್ಶೆ ಮತ್ತು ಸಂಸ್ಕೃತಿಯ ನೆಲೆಯಲ್ಲಿ ಕಂಡುಕೊಳ್ಳಲಾಗಿದೆ. ಅಕ್ಕನ ವಚನಗಳಲ್ಲಿ ಸಂವೇದನೆಯ ಸ್ವರೂಪವನ್ನ ಈ ಹಿನ್ನಲೆಯಲ್ಲಿ ಕಾಣಬಹುದಾಗಿದೆ. ಧಾರ್ಮಿಕ ಸಂವೇದನೆ. ಅಂದರೆ ಭಕ್ತಿಸಂವೇದನೆಯನ್ನು ಧಾರ್ಮಿಕತೆಯ ಒಳಗೆ ಕಾಣುವಂಥಹದ್ದು. ಅನಂತರದಲ್ಲಿ ಸಾಮಾಜಿಕ ಸಂವೇದನೆಯಲ್ಲಿ ಸಮಾಜ ಹೋರಾಟದ ಸಂವೇದನೆ, ವೇದಶಾಸ್ತ್ರದ ಬಗ್ಗೆ ಅಕ್ಕನ ನಿಲುವೇನು ಎಂಬುದು ಸಾಹಿತ್ಯದಲ್ಲಿ ಸಂವೇದನೆಯನ್ನು ಹುಡುಕುವಂತಹದ್ದು. ಕಾವ್ಯಾತ್ಮಕವಾಗಿ ಪ್ರಕೃತಿಯಲ್ಲಿ ಸ್ತ್ರೀಸಂವೇದನೆ ಇದರಲ್ಲಿ ಪ್ರೇಮ, ಕಾಮ, ವೈರಾಗ್ಯದ ನೆಲೆಯಲ್ಲಿ ಸಂವೇದನೆಯನ್ನು ಗುರುತಿಸುವಂಥದ್ದು. ಈ ಮೇಲ್ಕಂಡ ವಿಷಯಗಳ ವ್ಯಾಪ್ತಿಯಲ್ಲಿ ನನ್ನ ಈ ನಿಬಂಧವು ರಚನೆಗೊಂಡಿದೆ.

# ಅಧ್ಯಾಯ - ೨

# ಅಕ್ಕಮಹಾದೇವಿಯ ವ್ಯಕ್ತಿ ಚಿತ್ರ

## ೨.೧ ಬಾಲ್ಯಜೀವನ

ಅಕ್ಕಮಹಾದೇವಿಯು ವ್ಯಕ್ತಿ ವೈಶಿಷ್ಟದಿಂದಲೂ, ವಚನ ಸಾಹಿತ್ಯ ಶ್ರೇಷ್ಠತೆಯಿಂದಲೂ ಮೇಲಾದ ಶಿವಶರಣೆ. ನಮಗೆ ತಿಳಿದ ಮಟ್ಟಿಗೆ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಅವಳೇ ಮೊದಲನೆಯ ಕವಯಾತ್ರಿ. ಕಂತಿ ದಂತಕಥೆಯ ನಿರ್ಮಿತಿ ಅಲ್ಲವೆಂದಾದರೂ ಅವಳದು ಚತುರಕವಿತೆ. ಅನುಭವ ಜನ್ಯವಾದ ಹೃದಯಗೀತವಲ್ಲ. ಆಧ್ಯಾತ್ಮ ಮತ್ತು ಗದ್ಯ ಕವಿತ್ವ ಇವುಗಳ ಸಂಮಿಲನಕ್ಕಾದರೂ ಅಕ್ಕಮಹಾದೇವಿ ಮೊದಲಿಗರು. ಅವಳ ಚರಿತ್ರ ಕೃತಿಗಳಿಂದ ಆಧ್ಯಾತ್ಮಿಕ ಸಾಹಸ ಮತ್ತು ಸಿದ್ದಿಯ ರಮ್ಯತಿಯು ಕಣ್ಣು ಕಟ್ಟುವಂಥಹದ್ದು. ಇಂತ ಅಕ್ಕನ ಬಾಲ್ಯ ಜೀವನ ಗುರು, ದಿಗಂಬರತ್ವ, ಅನುಭವ ಮಂಟಪದ ಬಗ್ಗೆ ಹಲವಾರು ಕವಿಗಳು ಹಲವು ರೀತಿ ನಿರ್ಣಯಿಸಿದ್ದಾರೆ.

ಶಿವಮೊಗ್ಗ ಜಿಲ್ಲೆಯಲ್ಲಿರುವ ಉಡುತಡಿ ಎಂಬ ಗ್ರಾಮದಲ್ಲಿ ಅಕ್ಕ ಜನಿಸಿದಳು. ಇವಳು ಬಾಳಿ ಬದುಕಿದ ಕಾಲ ೧೨ನೇ ಶತಮಾನ. ಶರಣರ ಚರಿತ್ರೆಯನ್ನು ಸಂಪೂರ್ಣವಾಗಿ ಕಟ್ಟಿ ಕೊಡುವಲ್ಲಿ ನಮ್ಮ ಇತಿಹಾಸ ಮೌನ ತಾಳಿವೆ. ಈ ಮಾತು ಅಕ್ಕಮಹಾದೇವಿಯ ಜೀವನ ಚರಿತ್ರೆಯನ್ನು ತಿಳಿದುಕೊಳ್ಳಲು ಅಕ್ಕಮಹಾದೇವಿಯ ವಚನಗಳು ಹಾಗೂ ಬಸವಾದಿ ಶರಣರು ಇವಳನ್ನು ಕುರಿತು ಬರೆದಿರುವ ವಚನಗಳು ಮುಖ್ಯ ಆಧಾರಗಳು. "ಅಕ್ಕಮಹಾದೇವಿಯ ವಚನಗಳನ್ನು ಹಾಗೂ ಬಸವಾದಿ ಶರಣರ ವಚನಗಳನ್ನು ಜನಪದ ಹಾಡುಗಳನ್ನು ಆಧಾರವಾಗಿಟ್ಟುಕೊಂಡು ನಡುಗನ್ನಡದ ಕವಿಗಳು, ಅಕ್ಕಮಹಾದೇವಿಯ ಜೀವನ ಚರಿತ್ರೆಯನ್ನು ಕುರಿತು ತೆಲಗು ಕವಿಗಳು ಅಕ್ಕಮಹಾದೇವಿಯನ್ನು ಕುರಿತು ಕಾವ್ಯ ಬರೆದಿದ್ದಾರೆ. ಶೂನ್ಯ ಸಂಪಾದನೆಕಾರರು ಅಕ್ಕಮಹಾದೇವಿಯನ್ನು ಕುರಿತು 'ಶೂನ್ಯ ಸಂಪಾದನೆ'ಯಲ್ಲಿ ಪ್ರಸ್ತಾಪಿಸಿದ್ದಾರೆ."[೧] 'ಅಕ್ಕಮಹಾದೇವಿಯ ಮತ್ತು ಶರಣರ ವಚನಗಳನ್ನು ಹಾಗೂ ನಡುಗನ್ನಡ ಕವಿಗಳ ಕಾವ್ಯವನ್ನು ಆಧಾರವಾಗಿಟ್ಟುಕೊಂಡು ಹೊಸಗನ್ನಡದ ಕವಿಗಳು, ಸಾಹಿತಿಗಳು, ಅಕ್ಕಮಹಾದೇವಿಯನ್ನು ಕುರಿತು ಕಾವ್ಯ ಕಾದಂಬರಿ ನಾಟಕಗಳನ್ನು ಬರೆದಿದ್ದಾರೆ.'[೨] ಅನೇಕ ಲೇಖಕರು ವಿಮರ್ಶೆ ಲೇಖನಗಳನ್ನು ಬರೆದಿದ್ದಾರೆ.

ಮಹಾದೇವಿಯಕ್ಕನು ಬದುಕಿದ ಕಾಲಮಿತಿಯ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿಗೆ ಅವಕಾಶವೇ ಇಲ್ಲ. ಕಾರಣ ಅಕ್ಕ ಶಿವಶರಣರ ಸಮಕಾಲೀನಳಾಗಿ ಬಾಳಿದವಳೆನ್ನಲು, ಶರಣರ ವಚನಗಳಲ್ಲಿ ದೊರೆಯುವ ಆಂತರೀಕ ಪ್ರಮಾಣಗಳ ಸಬಲ ಆಧಾರಗಳಿವೆ. ಮಹಾದೇವಿಯಕ್ಕಳು ಬಸವಣ್ಣ, ಪ್ರಭುದೇವ, ಚೆನ್ನಬಸವಣ್ಣ, ಸಿದ್ದರಾಮ, ಮಡಿವಾಳ ಮಾಚಯ್ಯ ಇತ್ಯಾದಿ ಶರಣಗಣದಿಂದ ಕೃತಕಳಾಗಿದ್ದು, ಅವರೆಲ್ಲರ ಪ್ರತ್ಯಕ್ಷ ಒಡನಾಟದಿಂದ ತನ್ನ ಅನುಭವದ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡುದರ ಬಗೆಗಿನ ಆಕೆಯ

---

೧ ಅಕ್ಕಮಹಾದೇವಿ - ಡಾ.ವಿಜಯಶ್ರೀ ಸಬರದ-ಪುಟ-೮

೨ ಕನ್ನಡ ಸಾಹಿತ್ಯ ಚರಿತ್ರೆ - ಡಾ.ರಂ.ಶ್ರೀ.ಮುಗಳಿ-ಪುಟ-

ಕೃತಜ್ಞತಾ ಭಾವ, ಆಯಾ ಶರಣರನ್ನು ಸುತ್ತಿಸುವ ವಚನಗಳಲ್ಲಿ ವ್ಯಕ್ತವಾದದ್ದು ಗಮನಾರ್ಹ. ಅಂಥ ವಚನಗಳೂ ಬಹುಸಂಖ್ಯೆಯಲ್ಲಿ ಲಭ್ಯವಿದೆ.

'ಬಸವಣ್ಣನ ಮನೆಯ ಮಗಳಾಗಿ ಬದುಕಿದೆನಾಗಿ
ತನ್ನ ಕರುಣ ಭಕ್ತಿ ಪ್ರಸಾದವ ಕೊಟ್ಟನು
ಚೆನ್ನಬಸವಣ್ಣನ ತೊತ್ತಿನ ಮಗಳಾದ ಕಾರಣ
ಒಕ್ಕ ಪ್ರಸಾದವ ಕೊಟ್ಟನು
ಪ್ರಭುದೇವರ ತೊತ್ತಿನ ತೊತ್ತಿನ ಮರುದೊತ್ತಿನ ಮಗಳಾದ ಕಾರಣ
ಜ್ಞಾನ ಪ್ರಸಾದವ ಕೊಟ್ಟನು.'[೧]

ಅಕ್ಕನ ಈ ವಚನಗಳ ಭಾವವನ್ನು ಗಮನಿಸಿದರೆ ಆಕೆ ಬಸವಾದಿ ಪ್ರಥಮರ ಪ್ರತ್ಯಕ್ಷ ಒಡನಾಟದಲ್ಲಿ ಕೆಲವು ಅವಧಿಯವರೆಗೆ ಇದ್ದಿರಬೇಕೆನ್ನುವ ಅರ್ಥ ಹೊರಡುವಂತಿದೆ. ಇದಕ್ಕೆ ಸಂವಾದಿಯಾಗಿ ಅಕ್ಕನ ಉನ್ನತ ವ್ಯಕ್ತಿತ್ವವನ್ನು ಮನದುಂಬಿಕೊಂಡಾಡಿದ ಬಸವಣ್ಣ, ಪ್ರಭದೇವ, ಚನ್ನಬಸವಣ್ಣ ಇತ್ಯಾದಿ ಶರಣರ ವಚನಗಳೂ ಲಭ್ಯವಿದೆ. ಒಟ್ಟಾರೆ ಬಸವಾದಿ ಶಿವಶಂಕರ ಮತ್ತು ಅಕ್ಕನ ಕೃತಿಗಳ ಆಧಾರದಿಂದ ನಿರ್ಧರಿಸುವುದಾದರೆ ಮಹಾದೇವಿಯಕ್ಕನು ೧೨ನೇ ಶತಮಾನದಲ್ಲಿ ಬಾಳಿದ ಬಸವಣ್ಣ ಪ್ರಭುದೇವ ಚೆನ್ನಬಸವಣ್ಣ ಮುಂತಾದ ಹಿರಿಯ ಅನುಭವಿಗಳ ಕಿರಿಯ ಸಮಕಾಲಿನಳಾಗಿದ್ದಳೆನ್ನುವುದು ನಿಜವಾದ ಸಂಗತಿ. ಅಕ್ಕನಿಗೆ ರಕ್ತ ಸಂಬಂಧಕ್ಕಿಂತಲೂ ಶರಣಸಂಬಂಧ ಮುಖ್ಯವಾಗಿತ್ತು. ತನಗೆ ಜನ್ಮಕೊಟ್ಟ ತಾಯಿ-ತಂದೆಯ ಹೆಸರನ್ನು ಹೆಸರಿಸುವುದಕ್ಕಿಂತಲೂ ತಾನೂ ಬಸವಣ್ಣನ ಮನೆಯ ಮಗಳು ತಾನು ಎಂದು ಹೇಳಿಕೊಳ್ಳುವುದು ಅಕ್ಕನಿಗೆ ಹೆಮ್ಮೆಯ ವಿಷಯವಾಗಿತ್ತು. ಅಸಾಮಾನ್ಯ -ಆಂತಾರಿಕ ಎನ್ನಬಹುದಾದ ಗುರಿ, ಸಾಧನೆ ಸಿದ್ದಿಯಿಂದ ಮಹಾದೇವಿಯಕ್ಕ ಅಸದೃಶ್ಯ ಮಹಿಳೆ- ಅನುಭಾವಿ ಎನ್ನುವುದು ಸ್ಪಷ್ಟ. ಇಂಥ ಮಹಿಮಾನ್ವಿತ ಶಿವಶರಣೆ ಮಹಾದೇವಿಯಕ್ಕ. ಭುವಿಗೆ ಬಂದುದ್ದು ಯಾವುದೋ ಘನೋದ್ದೇಶಕ್ಕಾಗಿಯೇ ಎನ್ನುವ ಮನೋಧರ್ಮ ಪ್ರಪಂಚದಲ್ಲಿದೆ. ಕಾರಣ ಅಕ್ಕ ಸಾಮಾನ್ಯ ಹೆಣ್ಣಲ್ಲ, ಹೆಣ್ತನಕ್ಕೆ ದಿಟ್ಟತನವನ್ನು ಗುರಿಯನ್ನು ಸಿದ್ದಿಯನ್ನು ಗೆದ್ದುಕೊಟ್ಟ ಚೈತನ್ಯ ಶಕ್ತಿ. ಅಂತಯೇ ಆಕೆಯೊಬ್ಬ ಕಾರಣಿಕ ಸ್ತ್ರೀ. ಅಲ್ಲದೇ ಆಕೆಯ ಜನನವೂ ದೈವ ಪ್ರೇರಿತ ಎನ್ನುವ ಭಕ್ತಿಭಾವನೆ ಪ್ರಾಚೀನ ಕಾಲದಿಂದಲೂ ಪ್ರಚಲಿತದಲ್ಲಿದೆ. 'ಮಹಾದೇವಿಯಕ್ಕನ ತಾಯಿ-ತಂದೆಯರನ್ನು ಪ್ರಸ್ತಾಪಿಸುವ ಪ್ರಾಚೀನ ಕವಿಗಳ ಹೇಳಿಕೆಗಳಲ್ಲಿ ಒಮ್ಮತವಿಲ್ಲ. ಅಕ್ಕನ ತಂದೆ ತಾಯಿಗಳ ಬಗ್ಗೆ ಹಲವು ಚರ್ಚೆಗಳು ನಡೆಯುತ್ತಿವೆ.'[೨]

'ಮಹಾದೇವಿಯಕ್ಕನ ರಗಳೆ'ಯಲ್ಲಿ ಹರಿಹರನು ಅಕ್ಕನ ತಾಯಿ-ತಂದೆಯನ್ನು ಶಿವಭಕ್ತ-ಶಿವಭಕ್ತೆ ಎಂದು ಸಾಂಕೇತಿಕವಾಗಿ ಸೂಚಿಸಿದ್ದಾನೆ. "ಅಕ್ಕನ ಪೂರ್ವಾರ್ಥ ಜೀವನವನ್ನು ಚಿತ್ರಿಸಿದ ಹಲಗೆ ದೇವರು ಅಕ್ಕನ ತಾಯಿ-ತಂದೆಯನ್ನು ಜ್ಞಾನಿ-ನಿರ್ಮಲಾಂಗ ಎಂದು ಹೆಸರಿಸಿರುವರಾದರೂ ಅವೂ ಕೂಡ ಸಾಂಕೇತಿಕಾರ್ಥದ ಸೃಷ್ಟಿಗಳಾಗಿವೆ."[೩]

---

*೧. ಅಕ್ಕನ ವಚನಗಳು-ಸಂ.ಡಾ.ಎಲ್.ಬಸವರಾಜು-ವಚನ೩೩೮-ಪುಟ೧೬೦ (೧೯೬೬)*

*೨. ಅಕ್ಕಮಹಾದೇವಿ-ಡಾ.ಶಾಂತಾ ಇಮ್ರಾಪೂರ (೨೦೦೧)*

*೩. ಅಕ್ಕಮಹಾದೇವಿ-ಡಾ.ಶಾಂತಾ ಇಮ್ರಾಪೂರ (೨೦೦೧)*

ರಾಚಕವಿ ಸೂಚಿಸುವ ಓಂಕಾರ ಸೆಟ್ಟಿ ಲಿಂಗಮ್ಮ ಹೆಸರುಗಳು ಹೆಚ್ಚು ವಾಸ್ತವ ವೆನಿಸುವಂತಿದ್ದರೂ ಆತನು ಇತ್ತೀಚಿನ ಕವಿಯನ್ನೆವುದನ್ನು ಮರೆಯಬಾರದು. ಪ್ರಾಚೀನರಾದ ಹರಿಹರ, ಚಾಮರಸರಿಗೇ ದೊರೆಯದ ಐತಿಹಾಸಿಕ ವಿವರಗಳು, ತೀರ ಇತ್ತೀಚಿನವಾದ ಈ ಕವಿಗೆ ದೊರೆತಿರುವುದು ಚರ್ಚಸ್ಪಾದ. ಓಂಕಾರ, ಲಿಂಗಮ್ಮ ಈ ಹೆಸರುಗಳೂ ವೀರಶೈವ ತಾತ್ವಿಕ ಪಾರಿಭಾಷಿಕ ಹಿನ್ನಲೆಯಲ್ಲಿ ವಿಶ್ಲೇಷಿಸಿದಾಗ ಇವು ಸಾಂಕೇತಿಕವಾಗಿ ಹೆಸರುಗಳಾಗಿರುವುದು ವೇದ್ಯವಾಗುತ್ತದೆ. ಅಕ್ಕನ ಕೃತಿಗಳಲ್ಲಿ ಈ ವಿಷಯಕ್ಕೆ ಸಂಬಂಧಿಸಿದ ಉಲ್ಲೇಖಗಳು ದೊರೆಯದಿರುವುದು ಈ ಸಮಸ್ಯಯನ್ನು ಇನ್ನೂ ಜಟಿಲಗೊಳಿಸಿದೆ. ಸದ್ಯಕ್ಕೆ ಬಹುತೇಕ ಆಧುನಿಕ ವಿದ್ವಾಂಸರು, ವಿಮರ್ಶಕರು, ಚಾಮರಸ ಕವಿ ಸೂಚಿಸುವ ನಿರ್ಮಲ-ಸುಮತಿ ಎನ್ನುವ ಹೆಸರುಗಳನ್ನೇ ಒಪ್ಪಿಕೊಂಡಿದ್ದಾರೆ. ಇನ್ನೂ ಅಕ್ಕಮಹಾದೇವಿಯ ಗುರುವಿನ ವಿಚಾರದಲ್ಲಿಯೂ ಕೂಡ ಹಲವಾರು ಚರ್ಚೆಗೆ ಎಡೆಮಾಡಿಕೊಟ್ಟಿದೆ.

"ಗುರವಿಡಿದು ಕುರುಹು ಕಾಣಬೇಕು. ಗುರುವಿಡಿದು ಅರುವು ಕಾಣಬೇಕು. ಗುರವಿಡಿದು ಆಚಾರವೇ ಕಾಣಬೇಕು."[೧] ಎನ್ನುವ ಶರಣರ ನುಡಿ ಗುರು ವೀರಶೈವ ಆಚರಣೆಯ ಉಜ್ವಲ ಆದರ್ಶವನ್ನು ಪ್ರತಿಮಿಸುವ ಶಕ್ತಿ ಕೇಂದ್ರ ಎನ್ನುವುದನ್ನು ಸ್ಪಷ್ಟಗೊಳಿಸುತ್ತದೆ.

'ಬೋಧಕೋಯಂ ಸಮುಖ್ಯಾತೋ ಬೋಧ್ಯಮೇತವಿತಿ ಸುಜ್ಞಂ
ಶಿಷ್ಯೇ ನಿಯುಜ್ಯತೇ ಯೇನ ಶಿಷಾ ಗುರುರುಚ್ಯತೆ'.[೨]

ಭವದ ಕತ್ತಲೆಯ ಕಳೆದು ಪ್ರಾಪಂಚಿಕ ಭೇದ ಬ್ರಾಂತಿಯನ್ನು ನಿವಾರಿಸಿ ಶಿವಯೋಗ ಜ್ಞಾನವನ್ನು ಬೋಧಿಸುವವನೇ ಶಿಕ್ಷಾ ಗುರು. ಅಜ್ಞಾನವೆಂಬ ತಮಸ್ಸನ್ನು ಪರಿಹರಿಸಿ ಮೊಕ್ಷಸಾಧಕವಾದ ಜ್ಞಾನದೀಪವನ್ನು ಅನುಗ್ರಹಿಸುವ ಜ್ಞಾನಗುರು ಪ್ರತ್ಯೇಕ್ಷ ಪರಶಿವ. ಶಿಷ್ಯನಲ್ಲಿರುವ ಶಿವತತ್ವವನ್ನು ಸ್ಪೂಟಗಳಿಗೆ ನಿರ್ಮಲ ಶಿವಜ್ಞಾನವನ್ನು ಅನುಗ್ರಹಿಸಿ ಆತನನ್ನು ಜೀವನ್ಮುಕ್ತನನ್ನಾಗಿಸುವವನೇ ಜ್ಞಾನಗುರು. ಮಹಾದೇವಿಯಕ್ಕನಿಗೆ ನಿರಾಕಾರ ಮಲ್ಲಿಕಾರ್ಜುನನ್ನು ಲಿಂಗರೂಪದಲ್ಲಿ ಸಾಕಾರವಾಗಿಸಿ ಕರಸ್ಥಲಕ್ಕೆ ತಂದುಕೊಟ್ಟ ದೀಕ್ಷಾಗುರುವಿನ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಕಾರಣ ಪ್ರಾಚೀನ ಕಾವ್ಯ ಪುರಾಣಗಳಿಲ್ಲಿನ ಹೇಳಿಕೆಗಳಲ್ಲಿ ಒಮ್ಮತವಿಲ್ಲದಿರುವುದು ಜೊತೆಗೆ ಅಕ್ಕನೇ ಸ್ತುತಿಸಿದ ಗುರುವಿನ ಮಹಿಮೆಯ ವಚನಗಳಲ್ಲಿಯೂ ಏಕಾಭಿಪ್ರಾಯವಿಲ್ಲದಿರುವುದು ಈ ಸಮಸ್ಯೆಯನ್ನು ಮತ್ತಷ್ಟು ಜಟಿಲಗೊಳಿಸಿದೆ.

ಮಹಾದೇವಿಯಕ್ಕನಿಗೆ ದೀಕ್ಷಾಗುರುಗಳಿದ್ದು ಅವರಿಂದ ಅಕ್ಕನಿಗೆ ಲಿಂಗದೀಕ್ಷೆಯಾಯಿತೇನ್ನುವುದು ನಿರ್ವಿವಾದ ಸಂಗಂತಿ ಆದರೆ ಅಕ್ಕನಂತ ಅನುಭಾವಿ ವ್ಯಕ್ತಿತ್ವಕ್ಕೆ ಶಿವಚೈತನ್ಯದ ಅನುಸಂಧಾನ ಮಾಡಿಸಿಕೊಟ್ಟ ಮಹಾವ್ಯಕ್ತಿಯ ಹೆಸರಿನ ಖಚಿತವಾದ ಉಲ್ಲೇಖ ಕಾವ್ಯಗಳಲ್ಲಿ ದೊರೆಯುವುದಿಲ್ಲ. 'ಮಹಾದೇವಿಯಕ್ಕನ ರಗಳೆ'ಯಲ್ಲಿ ಕವಿ ಹರಿಹರನು ಮಹಾದೇವಿಗೆ ಶೈವಗುರು ಒಬ್ಬನಿಂದ ದೀಕ್ಷೆಯಾಗಿತ್ತೆನ್ನುವುದು ಅವನ ಅಭಿಪ್ರಾಯ.

---

೧. ಅಕ್ಕಮಹಾದೇವಿ-ಡಾ.ಶಾಂತಾ ಇಮ್ರಾಪೂರ-ಪುಟಸಂಖ್ಯೆ-೧೬೨ (೨೦೦೧)
೨. ಅಕ್ಕಮಹಾದೇವಿ-ಡಾ.ಶಾಂತಾ ಇಮ್ರಾಪೂರ-ಪುಟಸಂಖ್ಯೆ-೧೬೮ (೨೦೦೧)

ಚಾಮರಸ ಕವಿ ತನ್ನ ಪ್ರಭುಲಿಂಗ ಲೀಲೆಯಲ್ಲಿ ಅಕ್ಕನಿಗೆ ಲಿಂಗದೀಕ್ಷೆಯಾದ ಸನ್ನಿವೇಶವನ್ನು ಖಚಿತವಾಗಿ ಉಲ್ಲೇಖಿಸಿದ್ದಾನೆ. ಇಲ್ಲಿ ತಂದೆ ನಿರ್ಮಲನೇ ಸ್ವತ: ಗುರುವಿನ ಸ್ಥಾನದಲ್ಲಿ ಮಗಳು ಮಹಾದೇವಿಗೆ ಲಿಂಗದೀಕ್ಷೆ ಕೊಟ್ಟನೆನ್ನುವ ಸೂಚನೆಯಿದೆ.

'.....ಶೈವ ಪಂಚಾ
ಕ್ಷರಿಯನುಪದೇಶಿಸಿ ವಿನೂತ
ಹರುಷದಲಿ ಹರಿಸಿದನು. ನಿರ್ಮಳ ನಿಜಸುತೆಯ.'[1]

ಎಂದು ಕವಿ ಚಾಮರಸ ಹೇಳಿದ್ದಾನೆ. ಪ್ರಾಚೀನ ಕವಿಗಳ ಇಂತಹ ವಿಭಿನ್ನ ಹೇಳಿಕೆಗಳಿಂದ ವಿವಾದ ಗ್ರಸ್ಥವಾಗಿರುವ ಈ ಸಮಸ್ಯೆಯ ಜಟಿಲತೆಗೆ ಪೂರಕವಾಗಿರುವನೇ ಶೂನ್ಯ ಸಂಪಾದನೇಯ ಕತೃಗಳಾದ ಹಲಗೆಯ ದೇವರು ಬೋರೊಂದು ರೀತಿಯಲ್ಲಿ ಅಕ್ಕನ ಗುರುಗಳನ್ನು ಹೆಸರಿಸಿದ್ದಾರೆ. "ಪಂಡಿತಾರಾಧ್ಯರ ಕೈಯಲ್ಲಿ ದೀಕ್ಷೆಯಾಗಿ ಇಷ್ಟಲಿಂಗಮಂ ಪಡೆದ"ಳೆಂದು ಉಲ್ಲೇಖಿಸಿರುತ್ತಾರೆ.

ಗುರು ಮಹಿಮೆಯನ್ನು ನೆನೆಯುವ ಅಕ್ಕನ ವಚನದಲ್ಲಿ ಮೇಲಿಂದ ಮೇಲೆ 'ಗುರುಲಿಂಗ ದೇವ' ಎನ್ನುವ ಉಲ್ಲೇಖ ಬಂದಿರುವುದು ಗಮನಾರ್ಹವಾಗಿದೆ.

'ಶ್ರೀಗುರುಲಿಂಗ ದೇವರು ತಮ್ಮ ಹಸ್ತವ ತಂದು
ಎನ್ನ ಮಸ್ತಕದ ಮೇಲೆ ಇರಿಸಿದಾಗಲೇ
ಎನ್ನ ಭವಂ ನಾಸ್ತಿಯಾಯಿತು. ಎನ್ನು ತನ್ನಂತೆ ಮಾಡಿದ
ಎನಗೆ ತನಗೆ ತರಪಿಲ್ಲದಂತೆ ಮಾಡಿ ತೋರಿದನು ನೋಡಾ!'[೨]

ತನಗೊದಗಿದ ದೀಕ್ಷಾ ಸಂಸಾರವನ್ನು ಅನುಕ್ರಮವಾಗಿ ವಿವರಿಸುವ ಈ ವಚನದಲ್ಲಿ ಮಹಾದೇವಿಯಕ್ಕ ತನಗೆ ಇಷ್ಟಲಿಂಗ ದೀಕ್ಷೆಕೊಟ್ಟು ತ್ರಿವಿಧ ತನುವಿನಲ್ಲಿ ಲಿಂಗ ಚೈತನ್ಯವನ್ನು ಅನುಗೊಳಿಸಿ ಶಿವಪಥವನು ತೋರಿದವರು ಶ್ರೀಗುರುಲಿಂಗದೇವರು ಎಂದು ಧನ್ಯತೆಯಿಂದ ನೆನೆದಿದ್ದಾಳೆ. ಇದನ್ನು ಗಮನಿಸಿದರೆ ಮಹಾದೇವಿಯಕ್ಕಳ ಗುರು 'ಗುರುಲಿಂಗದೇವ'ರಾಗಿರವಬಹುದೆಂದು ಭಾಸವಾಗುತ್ತದೆ.

ಈ ಮೇಲಿನ ವಿವೇಚನೆಯಿಂದ ಮಹಾದೇವಿಯಕ್ಕನ "ದೀಕ್ಷಾ ಗುರು 'ಶ್ರೀಗುರುಲಿಂಗದೇವ'ರೆಂದು ಶಿಕ್ಷಾ ಗುರು ಬಸವಣ್ಣರೆಂದು, ಜ್ಞಾನ ಗುರುಪ್ರಭುದೇವರೆಂದು ಸ್ಥೂಲವಾಗಿ ನಿರ್ಧರಿಸಿದ್ದಾರೆ."[೩]

---

೧. ಅಕ್ಕನಮಹಾದೇವಿ-ಡಾ.ಶಾಂತಾ ಇಮ್ರಾಪೂರ-ಪುಟಸಂಖ್ಯೆ-೧೬೩(೨೦೦೧)
೨. ಅಕ್ಕನ ವಚನಗಳು-ಸಂ.ಡಾ.ಎಲ್.ಬಸವರಾಜ-ವಚನ-೪೧-ಪುಟ೫೪ (೧೯೬೬)
೩. ಅಕ್ಕನಮಹಾದೇವಿ-ಡಾ.ಶಾಂತಾ ಇಮ್ರಾಪೂರ-ಪುಟಸಂಖ್ಯೆ-೧೭೧(೨೦೦೧)

ಮಹಾದೇವಿಯಕ್ಕನ ಬಾಲ್ಯ ಮತ್ತು ವಿದ್ಯಾಭ್ಯಾಸ ಕುರಿತಂತೆ ಪ್ರಾಚೀನ ಕೃತಿಗಳಲ್ಲಿ ವಿವರಗಳಿಲ್ಲದಿದ್ದರೂ ಮಹಾದೇವಿಯಕ್ಕ ಬಾಲ್ಯದಲ್ಲಿಯೇ ಧರ್ಮಶಾಸ್ತ್ರ, ಸಾಹಿತ್ಯ, ತತ್ವಜ್ಞಾನದ ಪ್ರೌಢ ವಿದ್ಯಾಭ್ಯಾಸ ನಡೆಸಿದಂತೆ ತೋರುತ್ತದೆ. (ಗುರುಮುಕೇನ) ಅಕ್ಕನ ವಚನಗಳಲ್ಲಿ ಕಂಡುಬರುವ ಸಂಸ್ಕೃತ ಕಾವ್ಯ ಪುರಾಣಗಳ ಉಲ್ಲೇಖಗಳ ಹಾಗೇ ಶಾಸ್ತ್ರಾಧ್ಯಯನ ಮತ್ತು ತತ್ವಜ್ಞಾನದ ತಿಳುವಳಿಕೆಯನ್ನು ಪ್ರಕಟಿಸುತ್ತದೆ. ಇದಕ್ಕೆ ಪೂರಕವೆನ್ನುವಂತೆ "ಶಿವಭಕ್ತಿ ಚರಿತ್ರೆಯ, ಶಿವಜ್ಞಾನ ಸಂಪನ್ನೆಯ, ಸಾಹಿತ್ಯವಿಧೇಯ, ಸಕಲಕಲಾಕೋವಿದೆಯಪ್ಪುಡುತಡಿಯ ಮಹಾದೇವಿಯ ತನುವಿನ ಬಾಲ್ಯಂ ಸಡಿಲ್ದು" ಎಂದಿರುವುದು ಗಮನಾರ್ಹ.[೧]

**೨.೨ ಸಾಂಸಾರಿಕ ಜೀವನ :**

ಭಕ್ತಿರೂಪ ಸಂಪನ್ನೆಯಾದ ಮಹಾದೇವಿಯಕ್ಕನ ಆಧ್ಯಾತ್ಮಿಕ ಜೀವನದಲ್ಲಿ ಬಿರುಗಾಳಿಯಂತೆ ಬಂದು ಆಕೆಯ ಸಾಧನೆಗೆ ಪ್ರಖರತೆಯನ್ನು ನೀಡಿದ ವ್ಯಕ್ತಿ ಕೌಶಿಕ. ಆತ ಉಡುತಡಿಯ ದೊರೆಯಾಗಿದ್ದನೆಂದು ಪ್ರಾಚೀನ ಕಾವ್ಯಗಳಲ್ಲಿ ಏಕ ರೀತಿಯಾಗಿ ಕಾಣಬಹುದು. ಮಹದೇವಿಯಕ್ಕ ಚಿಕ್ಕಂದಿನಿಂದಲೂ ಶಿವಭಕ್ತಿಯುಕ್ತಳಾಗಿ ಚೆನ್ನಮಲ್ಲಿಕಾರ್ಜುನನ ಹಂಬಲವನ್ನು ಹಚ್ಚಿಕೊಂಡು ಎಳತನದ ಬಾಲಲೀಲೆಯ ಮನೋಭಾವದಿಂದಲೊ, ಸಂಸ್ಕಾರ ವಿಶೇಷದಿಂದಲೊ, ದೈವ ಸಂಕಲ್ಪದಿಂದಲೊ, ಪರಮಾತ್ಮನನ್ನೇ ಮದುವೆಯಾಗಬೇಕೆಂದಿದ್ದಳು. ಪರಮಾತ್ಮನು ಸಾಕ್ಷಾತಾಗಿ ಎದುರಿಗೆ ಬಂದು ಮದುವೆ ಮಾಡಿಕೊಳ್ಳುವ ಸಿಂಧು ಮುಗ್ದತನದಿಂದ ಭಾವಿಸಿ ಮನುಷ್ಯರು ಯಾರನ್ನು ಗಂಡನನ್ನಾಗಿ ಸ್ವೀಕರಿಸಲು ಒಲ್ಲದೆ ಹಾಗಯೇ ಬೆಳೆದು ಯೌವ್ವನವತಿಯಾಗಿದ್ದಳು. ಹೀಗೆ ಭಾವಿಸುತ್ತಿದ್ದ ಮಹದೇವಿಯಕ್ಕನಿಗೆ ಆ ಗಂಡನನ್ನು ದೊರಕಿಸಿಕೊಡುವುದು ಹೇಗೆಂದು ತಂದೆತಾಯಿಗಳು ಚಿಂತಿಸುತ್ತಿದ್ದರು. ಆಕೆಗಾದರೋ ಶರಣ ಸತಿಲಿಂಗಪತಿ ಎಂಬ ಭಾವ ಸ್ವಾಭಾವಿಕ ಅಂಕುರಿಸಿ ಪಲ್ಲವಿಸಿತ್ತು. ಹೀಗೆ ಚೆನ್ನಮಲ್ಲಿಕಾರ್ಜುನನಲ್ಲಿ ಮಗ್ನ ಮಾನಸಳಾಗಿ ಸುಂದರಿಯಾಗಿ ಯೌವ್ವನವತಿಯಾಗಿ 'ಪುಟವನಿಕ್ಕಿದ ಮಿಸುಕಿಯಂತಿರಲು'[೨] ಆ ಊರಿನ ದೊರೆಯಾದ ಕೌಶಿಕನು ಒಂದು ದಿನ ವೈಹಾಳಿಯಿಂದ ಹಿಂದಿರುಗುತ್ತ ಮಹದೇವಿಯನ್ನು ನೋಡಿ ಒಡನೆಯೆ ಮೋಹಿಸಿ ಆಕೆಯನ್ನು ಮದುವೆಯಾಗಬೇಕೆಂದು ಬಯಸಿದನು. ಪ್ರೇಮ ಭಿಕ್ಷಾಟನೆಯಾಯಿತು. ಮಹದೇವಿಯಕ್ಕನ ತಂದೆತಾಯಿಗಳು ಸಂಕಟಕ್ಕೊಳಗಾದರು. ಅಕ್ಕಮಹಾದೇವಿ ಅನಿವಾರ್ಯವಾಗಿ ಮೂರು ನಿಯಮಗಳಿಗೆ ಒಪ್ಪಿಸಿ ಆತನೊಂದಿಗೆ ವಿವಾಹವಾಗುತ್ತಾಳೆ. ಅಕ್ಕಮಹಾದೇವಿಯು ಕೌಶಿಕನಿಗೆ ಮೂರು ನಿಯಮಗಳನ್ನು ಹಾಕುವುದರ ಮೂಲಕ ಸ್ವಾತಂತ್ರ್ಯ ಪಡೆಯಲು ಮತ್ತು ಸ್ವತಂತ್ರವಾಗಿ ಇರಲು ಪ್ರಯತ್ನಿಸಿದ್ದು ಇಡೀ ಮಹಿಳಾಲೋಕಕ್ಕೆ ಉಪಕಾರವಾಯಿತು. ಪತಿಯನ್ನು ಪ್ರಶ್ನಿಸಿದ ಮೊದಲ ಮಹಿಳೆ ಇವಳಾದಳು.

ಈ ಲೌಕಿಕ ಬಂಧನದಿಂದ ಮುಕ್ತಳನ್ನಾಗಿ ಮಾಡೆಂಬ ದೀನಲಾಪ (ಚನ್ನಮಲ್ಲಿಕಾರ್ಜುನನಲ್ಲಿ) ಕೌಶಿಕನಾದರೂ ಲೌಕಿಕ ಸಂಸಾರವನ್ನು ನಡೆಸಬೇಕೆಂದು ಆಕೆಯನ್ನು ಮದುವೆಯಾದನು. ಈ ವಿರಸ ಸಂಸಾರ ಎಷ್ಟು ಕಾಲವಿರುವುದು? ಆಕೆಯನ್ನು ಕೇವಲ ಭೋಗ ಸಾಮಗ್ರಿಯೆಂದು ಭಾವಿಸಿ

---

*೧. ಅಕ್ಕನಮಹಾದೇವಿ-ಡಾ.ಶಾಂತಾ ಇಮ್ರಾಪೂರ- (೨೦೦೧)*



*೨. ವಚನ ಧರ್ಮಸಾರ- ಎಂ.ಆರ್.ಶ್ರೀನಿವಾಸ್‌ಮೂರ್ತಿ-ಪುಟ-೧೦೬ (೧೯೮೮)*

ವ್ರತಭಂಗಮಾಡಿದನೋ ಹೇಗೂ ಅವನ ಮೂರು ತಪ್ಪುಗಳನ್ನು ಮಾಡಿದನು. ಮಹದೇವಿಯಕ್ಕ ಸಂಸಾರ ತ್ಯಾಗ ಮಾಡಿ ವಿರಕ್ತಳಾಗಿ ಚೆನ್ನಮಲ್ಲಿಕಾರ್ಜುನನ್ನು ಹುಡುಕಿಕೊಂಡು ಹೊರಟಳು.

### ೨.೩ ದಿಗಂಬರತ್ವ

ಲೌಕಿಕರಿಗೆ ಅವಾಸ್ತವವಾಗಿ ವಿಲಕ್ಷಣವಾಗಿ ತೋರುವ ಅನೇಕ ವಿಪರೀತದ ಅಸಹರವೆನಿಸುವ ಘಟನೆಗಳು ಮಹಾತ್ತರವಾದ ಬದುಕಿನಲ್ಲಿ ತೀರ ಸಹಜ ಕ್ರಿಯೆಗಳಂತೆ ನಡೆದು ಹೋಗುವುದು ಅಸಂಭವವೆನೆಲ್ಲ. "ಲೋಕವೆಂಬ ಮಾಯೆಗೆ ಶರಣಚಾರಿತ್ರ್ಯ ಮರುಳಾಗಿ ತೋರುವುದು ನೋಡಾ." [೧] ಎನ್ನುವ ಅಕ್ಕನ ಸ್ವಾನುಭಾವದ ಕಿಡಿನುಡಿ ಇದಕ್ಕೆ ಸೂಕ್ತ ನಿರ್ದಶನವಾಗಿದೆ. ಉಡುಕತಡಿಯನ್ನು ತೊರೆದು ಹೊರಟ ಅಕ್ಕ ಉಟ್ಟುಡುಗೆ ತೊಟ್ಟಾಭರಣಗಳನ್ನೆಲ್ಲಾವನ್ನು ಕಳೆದಿಟ್ಟು ದಿಗಂಬರೆಯಾಗಿ ಹೊರಬದ್ದಳೆಂದು ಕಾವ್ಯಗಳು ಹೇಳುತ್ತವೆ. ವಿದ್ವಾಂಸರು ಇವನ್ನು ನಂಬಿದ್ದಾರೆ. ಆದರೆ ಮೂಲತ: ಕೇಶಾಂಬರಿಯಾಗಿ ಅರಮನೆಯಿಂದ ಹೊರಬಂದಳೆಂದು ಕವಿಗಳು ಬರೆದಿರುವುದನ್ನು ಮುಂದಿನವರು ತಲೆಗೂದಲಿನಿಂದಲೇ ಮೈಮಚ್ಚಿಕೊಂಡಳೆಂದು ಭಾವಿಸುತ್ತೆ ಬಂದಂತಿದೆ. ಇಲ್ಲಿ ಕೇಶಾಂಬರವೆಂದರೆ ಕೂದಲಿನ ಬಟ್ಟೆ (ಕಂಬಳಿ) ಎಂದೇ ಅರ್ಥವಿದೆಯೆಂದು ಇತ್ತೀಚಿನ ವಿದ್ಯಾಂಸರು ಹೇಳುತ್ತಿರುವುದು ಸರಿಯೆಂದು ತೋರುತ್ತದೆ. ಕೊಂಡಗುಳಿ ಕೇಶಿರಾಜನು ಮಂತ್ರಿಪದವಿಯನ್ನು ಧಿಕ್ಕರಿಸಿದ ಸಂದರ್ಭದಲ್ಲಿ ದಿವ್ಯ ವಸ್ತ್ರಾಭರಣವನ್ನು ಕಳಚಿ ಕೇಶಾಂಬರನಾಗಿ ಹೊರಬಿದ್ದನೆಂದು ಹರಿಹರ ಹೇಳುತ್ತಾನೆ. ಇಲ್ಲಿ ಪುರುಷನಾದ ಕೇಶಿರಾಜ ಕಂಬಳಿಯನ್ನು ಹೊದ್ದುಕೊಂಡು ಹೋದನೆಂದು ಅರ್ಥಮಾಡಬೇಕಾಗುತ್ತದೆ.

ಕಂಬಳಿಯು ವೈರಾಗ್ಯದ ಸಂಕೇತವೆಂದು ಈಗಲೂ ಜನಪದರು ನಂಬಿರುವುದನ್ನು ಇಲ್ಲಿ ನೆನೆಯಬಹುದು. ಈ ಹಿನ್ನಲೆಯಲ್ಲಿ ಮಹಾದೇವಿಯಕ್ಕ ದಿಗಂಬರೆಯಾಗಿ ಹೊರಬದ್ದವೆನ್ನುವುದಕ್ಕಿಂತ ಕಂಬಳಿಯನ್ನು ಹೊದ್ದು ಹೋರಟಳೆಂದು ಇಟ್ಟುಕೊಳ್ಳುವುದೇ ಸೂಕ್ತವೆಂದು ತೋರುತ್ತದೆ. ಅಕ್ಕನ ದಿಗಂಬರತ್ವಕ್ಕೆ ಹಲವಾರು ಕವಿಗಳು, ವಿದ್ವಾಂಸರು ಬೇರೆಬೇರೆ ಅಭಿಪ್ರಾಯವನ್ನು ಪಟ್ಟಿದ್ದಾರೆ.

ಇದು ಅಕ್ಕನ ಜೀವನದಲ್ಲಿ ಒಂದು ಅಗ್ನಿದಿವ್ಯ ಘಟನೆ, ಆಕೆ ವಿಚಾರ ಸ್ವಾತಂತ್ರ್ಯದ ಮಹಿಳೆ. ಅರಮನೆಯಿಂದ ಹೊರಬಿದ್ದ ಅಕ್ಕ ಮುಂದೆ ಬೇರ ಬೇರೆ ಒರೆಗಲ್ಲುಗಳಿಗೆ ವಸ್ತುವಾಗಿ ನಿಲ್ಲಬೇಕಾಯಿತು. ಅವಳ ಅನೇಕ ವಚನಗಳಲ್ಲಿ ಈ ಮಾತಿಗೆ ನಿರ್ದಶನಗಳು ದೊರೆಯುತ್ತವೆ. 'ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದಡೆಂತಯ್ಯ ಚಂದನವ ಕಡಿದು ಕೊರೆದು ತೇದಡೆ ನೊಂದನೆಂದು ಕಂಪಬಿಟ್ಟತ್ತೆ?' [೨] 'ಮನೆಮನೆದಪ್ಪದೆ ಕೈಯ್ಯೆಡ್ಡಿ ಬೇಡವಂತೆ ಮಾಡಯ್ಯ, ಹಸಿವಾದೊಡೆ ಊರೊಳಗೆ ಭಿಕ್ಷಾನ್ನಗಳುಂಟು, ತೃಪ್ತಿಯಾದಡೆ ಕೆರೆ ಬಾವಿಗಳುಂಟು' [೩] ಮೊದಲಾದ ವಚನಗಳಲ್ಲಿ ಈ ಅಂಶಗಳನ್ನು ಗುರುತಿಸಬಹುದು. ತನ್ನ ಜೀವನದ ಉತ್ತರಾರ್ಧದಲ್ಲಿ ಅವಳು ಮಲ್ಲಿಕಾರ್ಜುನನ ವಶವರ್ತಿಯಾಗಿ ಲೋಕವನ್ನೆಲ್ಲಾ ಸುತ್ತಿ ಕಲ್ಯಾಣವನ್ನು ಪ್ರವೇಶಿಸಿದ್ದು ಮತ್ತೊಂದು ಮುಖ್ಯ ಘಟನೆ.

---

*೧. ಅಕ್ಕನಮಹಾದೇವಿ-ಡಾ.ಶಾಂತಾ ಇಮ್ರಾಪೂರ-ಪುಟ-೨೦೯ (೨೦೦೧)*

*೨. ಶಿವಶರಣೆಯರ ವಚನ ಸಂಪುಟ ೫- ಡಾ.ವೀರಣ್ಣರಾಜೂರ-ಪುಟ-೩೫ (೨೦೦೬)*

*೩ ಅಕ್ಕನಮಹಾದೇವಿ-ಡಾ.ಶಾಂತಾ ಇಮ್ರಾಪೂರ-ಪುಟ-೨೨೫ (೨೦೦೧)*

**೨.೪ ಅನುಭವಮಂಟಪದಲ್ಲಿ ಅಕ್ಕಮಹಾದೇವಿ:**

ಅಕ್ಕ ಕಲ್ಯಾಣಕ್ಕೆ ಬರುವ ಮುನ್ನವೇ ಅವಳ ತಾತ್ವಿಕ ನಿಲುವುಗಳು ಹಾಗೂ ಜೀವನ ವಿಧಾನದ ಪರಿಕಲ್ಪನೆಗಳೂ ಬಹುಮಟ್ಟಿಗೆ ಸಿದ್ದವಾಗ್ಗಿದವು. ಅನುಭವ ಮಂಟಪಕ್ಕೆ ಬಂದ ಅಕ್ಕ ಪ್ರಭುದೇವನಿಂದ ಪರೀಕ್ಷಿತಳಾಗಿ 'ತಾನು ಮನಸಿದ ಜನ ಹಣೆಯ ಬರಹದ ತೊಡೆದವಳೆ'[೧]ಎನ್ನುವುದನ್ನು ಮತ್ತೋಮ್ಮೆ ಪ್ರಪಂಚಕ್ಕೆ ಪ್ರಕಟಿಸಿದ್ದನ್ನು ವಚನಗಳ ಹಿನ್ನಲೆಯಲ್ಲಿ ಶೂನ್ಯ ಸಂಪಾದನೆಗಳು ಉದ್ಬೋಧಕವಾಗಿ ಚಿತ್ರಿಸಿವೆ.

ಕಿನ್ನರಿ ಬ್ರಹ್ಮಯ್ಯನ ಪರೀಕ್ಷೆಯಲ್ಲಿ ತನ್ನ ನಿಜಭಕ್ತಿ-ವಿರಕ್ತಿಯನ್ನು ಸಾಬೀತುಪಡಿಸಿ ಆತನೊಂದಿಗೆ ಕಲ್ಯಾಣವನ್ನು ಪ್ರವೇಶಿಸಿ ಅನುಭವ ಮಂಟಪಕ್ಕೆ ಬಂದಳೆನ್ನುವುದು ಪ್ರಾಚೀನ ಕವಿಗಳ ಅಭಿಪ್ರಾಯ. ಹರಿಹರನನ್ನುಳಿದು ಪ್ರಾಚಿನ ಕಾವ್ಯಗಳಲ್ಲಿ ಮತ್ತು ನಾಲ್ಕು ಶೂನ್ಯ ಸಂಪಾದನೆಗಳಲ್ಲಿ ಮಹಾದೇವಿಯಕ್ಕ ಅನುಭವ ಮಂಟಪದಲ್ಲಿ ಪ್ರಭುದೇವರಾಧಿಯಾಗಿ ಶರಣರ ಪರೀಕ್ಷೆಯನ್ನು ಎದುರಿಸಿದ ಸನ್ನಿವೇಶದ ನಿರೂಪಣೆಯಿದೆ. ಮಹಾದೇವಿಯಕ್ಕನ ವಚನಗಳಲ್ಲಿ ಇಂತಹದೊಂದು ಪ್ರಸಂಗವನ್ನು ಸಮರ್ಥಿಸುವ ಮಾತುಗಳು ದೊರಕುತ್ತವೆ.

"ಸಮ ಕಾಲೀನ ಸಮಾಜದ ಸ್ತ್ರೀಧರ್ಮದ ಮೌಲ್ಯಗಳಿಗೆ ವ್ಯತಿರಿಕ್ತವಾಗಿ ತನ್ನ ಬದುಕಿನ ದಾರಿಯನ್ನು ಆಯ್ದುಕೊಂಡ ಮಹಾದೇವಿಯಕ್ಕನ ವ್ಯವಸ್ಥೆ ಅಸಹನೆ ಪ್ರತಿರೋಧಗಳನ್ನು ಅನುಭವಿಸಿದ್ದಾಳೆ. ಮತ್ತೆ ಮತ್ತೆ ಸಮರ್ಥಿಸಿಕೊಳ್ಳಬೇಕಾದ ಬಿಕ್ಕಟ್ಟನ್ನು ಎದುರಿಸಿದ್ದಾಳೆ. ವಿರಾಗಿಣಿ ಅಕ್ಕನ ಸತಿ-ಪತಿ ಭಕ್ತಿಯ ಉಜ್ಜಲತೆಯನ್ನು ಕಾಯಜೀವ ಭಾವದ ನಿವೃತ್ತಿಯನ್ನು ಪ್ರಪಂಚಕ್ಕೆ ಮನಗಾಣಿಸಿಕೊಡುವಲ್ಲಿ ಪೂರಕವಾಗಿರುವ ಅನುಭವ ಮಂಟಪದ ಅನುಭವ ಪರೀಕ್ಷೆಯು ಮಹಾದೇವಿಯಕ್ಕನ ಬದುಕಿನ ಅತ್ಯಂತ ಸಂಕೀರ್ಣ ಸಂದರ್ಭವಾಗಿದೆ." [೨] ಪ್ರಭುತ್ವ ಮತ್ತು ಪುರುಷಾಧಿಕಾರವನ್ನು ಏಕಕಾಲಕ್ಕೆ ದಿಕ್ಕರಿಸಿ ಅಕ್ಕನ ಪ್ರಕಾರ ವ್ಯಕ್ತಿತ್ವದ ಪರೀಕ್ಷೆಯಾಗಿರುವ ಪ್ರಸ್ತುತ ಪ್ರಸಂಗವು ಪೌರಾಣಿಕ ಆದರ್ಶಕ್ಕಾಗಿ ಲೌಕಿಕ ನೆಲೆಯಲ್ಲಿ ಮಹಾದೇವಿಯಕ್ಕ ನಡೆಸಿದ ಸಂಘರ್ಷದ ಚಿತ್ರವನ್ನು ಸ್ಪೂಟವಾಗಿ ಹಿಡಿದಿಟ್ಟಿದ್ದಾರೆ.

ಪ್ರಭುದೇವ, ಬಸವಣ್ಣ, ಸಿದ್ದರಾಮ, ಮಡಿವಾಳ ಮಾಚಯ್ಯರಾದಿಯಾಗಿ ಶರಣರಿಂದ ತುಂಬಿದ ಅನುಭವಮಂಟಪವನ್ನು ಪ್ರವೇಶಿಸಿದ ಮಹಾದೇವಿಯಕ್ಕ ಶರಣರಿಂದ ತೀವ್ರ ಪರೀಕ್ಷೆಯನ್ನು ಎದುರಿಸಬೇಕಾಗುತ್ತದೆ. ಹೆಣ್ಣೆಂಬ ಕಾರಣಕ್ಕಾಗಿಯೇ ತನ್ನ ಆಸಕ್ತಿಯ ಆಯ್ಕೆಯನ್ನು ಚಾರಿತ್ರ್ಯ ಶುದ್ದಿಯನ್ನು ವೈರಾಗ್ಯದ ಸತ್ವವನ್ನು ಸಾಬೀತುಪಡಿಸಿಕೊಳ್ಳಬೇಕಾದ ವಿಪರ್ಯಾಸಕ್ಕೆ ಒಳಗಾಗಬೇಕಾಗುತ್ತದೆ. ಅಲ್ಲಮ್ಮ ಪ್ರಭು ಅನುಭವಮಂಟಪದಲ್ಲಿ ಹಲವು ಪ್ರಶ್ನೇಗಳಿಗೆ ಅಕ್ಕನನ್ನು ಒಳಮಾಡುತ್ತಾನೆ. "ಕಾಯದ ಲಜ್ಜೆಯ ಕಲ್ಪತವ ಕಳೆದು ಜೀವನದ ಲಜ್ಜೆಯ ಮೋಹವನ್ನಳಿದು ಭಾವದ ಕೂಟ ಬತ್ತಲೆಯಾದರಿದು ದಿಗಂಬರವೇ ದಿವ್ಯಾಂಬರವಾಗಿ ಅನುಭವಮಂಟಪಕ್ಕೆ ಬಂದು ಮಹಾದೇವಿಯನ್ನು ಪ್ರಭುದೇವರ ನಿಷ್ಠುರವಾಣಿ" [೩] ತಡೆಯುತ್ತದೆ.

---

೧. ಅಕ್ಕನಮುಹಾದೇವಿ-ಡಾ.ಶಾಂತಾ ಇಮ್ರಾಪೂರ (೨೦೦೧)

೨. ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ- ಡಾ.ಹೆಚ್.ಎಸ್.ಶ್ರೀಮತಿ-ಪುಟ-೭೨-೭೩ (೨೦೦೬)

೩ ಅಕ್ಕನಮುಹಾದೇವಿ-ಡಾ.ಶಾಂತಾ ಇಮ್ರಾಪೂರ (೨೦೦೧)

'ಉದಮದದ ಯೌವ್ವನವನ್ನೊಳಗೊಂಡ ಸತಿ ನೀನು, ಇತ್ತಲೇಕೆ ಬಂದಿಯಲ್ಲಾ? ಸತಿಯೆಂದರೆ ಮಾನವರು ನಮ್ಮ ಶರಣರು ನನ್ನ ಪತಿಯ ಕುರುಹ ಹೇಳಿದರೆ ಬಂದು ಕುಳ್ಳಿರು ಇಲ್ಲದಿದ್ದರೆ ತೊಲಗು ತಾಯೆ ನಿನ್ನ ಪತಿಯಾರೆಂಬುದ ಹೇಳಾ ಎಲೆ ಅವ್ವಾ?'[೧] ಲೋಕದ ಕಟ್ಟಳೆ ಮುರಿದು ವಿರಾಗಿಯಾಗಿ ಹೊರಟ ಮಹಾದೇವಿಯಕ್ಕನ ನಿಲುವನ್ನು ಆಧ್ಯಾತ್ಮದ ಫಲವನ್ನು ಲೌಕಿಕ ದೃಷ್ಟಿಯ ನಿಕಷಕ್ಕೊಡ್ಡಿ ಸ್ಪಷ್ಟೀಕರಣ ಬಯಸುವ ಪ್ರಭುವಿನ ಪ್ರಶ್ನೆಗೆ ಮಹಾದೇವಿಯಕ್ಕನು ಕೊಡುವ ಉತ್ತರ ಆಕೆಯ ಭಾವನೆಯನ್ನು ಬಚ್ಚಿಸುತ್ತದೆ. 'ಹರನೇ ಗಂಡನಾಗಬೇಕೆಂದು ಅನಂತಕಾಲದಿಂದ ತಪಸ್ಸು ನಡೆಸಿದ ತನಗೆ ಚೆನ್ನಮಲ್ಲಿಕಾರ್ಜುನದೇವನೇ ಚೆಲುವ ಗಂಡನೆಂದು ಮಿಕ್ಕದ ಲೋಕದ ಗಂಡರ ಸಂಬಂಧವಿಲ್ಲವೆಂದು'[೨] ಖಚಿತಪಡಿಸುತ್ತಾಳೆ. ಪ್ರಪಂಚದ ಇತಿಹಾಸವೇ ಕಂಡರಿಯದ ಅದ್ಭುತ ರೀತಿಯಲ್ಲಿ ವಿರಾಹಿಣಿಯಾಗಿ ಕಾಯವ್ಯಮೋಹ ಕಳೆದುಕೊಂಡು ನಿಕಾಮಿಯಾದುದರ ಸಂಕೇತವಾಗಿ ದಿಗಂಬರಿಯಾಗಿಯೂ, ಕೇಶಾಂಬರಿಯಾದ ಅಕ್ಕನ ದ್ವಂದ್ವ ನೀತಿಯನ್ನು ಪ್ರಶ್ನಿಸಿ ಅದು ಆಕೆಯ ಅಂತರಂಗದ ಅಪರಿಪೂರ್ಣತೆಯ ಸಂಕೇತವೆಂದು ಪ್ರಭು ವಿಡಂಬಿಸುತ್ತಾನೆ. ಎಡೆಗೆಡಿಸುವ ಈ ಪ್ರಶ್ನೆಗೆ ಮಹಾದೇವಿಯಕ್ಕ ಕೊಡುವ ಉತ್ತರದಲ್ಲಿ ವಾಸ್ತವತೆಯ ಛಾಯೆಯಂತಿದೆ. ತನಗಾಗಿ ಅಲ್ಲವಾದರೂ ಕಾಮನ ಮುದ್ರೆಯ ಕಂಡು ಕೆರಳುವ ತಾಕಿಕರಿಗಾಗಿ ತಾವು ಕೇಶಾಂಬರಿಯಾಗಿದುದ್ದರ ಔಚಿತ್ಯವನ್ನು ಮನವರಿಕೆ ಮಾಡಿಕೊಡುತ್ತಾಳೆ. ಹಲವಾರು ಚರ್ಚೆಗೆ ಒಳಗಾದ ಪ್ರಶ್ನೇಗಳಿಗೆ ಸೂಕ್ತ ನಿಲುವುಗಳನ್ನು ಕೊಡುತ್ತಾಳೆ. ಸರ್ವಾಂಗಲಿಂಗವಾದ ಮಹಾದೇವಿಯಕ್ಕನ ಘನನಿಲುವನ್ನು ಲಿಂಗಾರ್ಪಿತ ಭಾವದ ಸರ್ವಾರ್ಪಣೆಯನ್ನು ಮನಗಂಡ ಪ್ರಭದೇವರು ಲಿಂಗ-ಲಿಂಗವೆಂಬ ಉಭಯನಾಮವಳಿದ ಅತೀತಳೆಂದು ಕೊಂಡಾಡುತ್ತಾರೆ.

ಅಕ್ಕನ ಸತ್ವಪರೀಕ್ಷೆ ಕಲ್ಯಾಣದಲ್ಲಿ ಮುಂದುವರಿಯಿತು. ಬಸವಾದಿಶರಣರ ಸಮ್ಮುಖದಲ್ಲಿ ಆಕೆಯ ಒಳಸತ್ವವು ಒರಗೆ ಹಚ್ಚಲ್ಪಟ್ಟು ಅಕ್ಕನ ಸ್ವಾನುಭಾವದೆತ್ತರವನ್ನು ಆನಂದದಿಂದ ಕೊಂಡಾಡುತ್ತಾರೆ. ಅದಕ್ಕೆ ಪ್ರತಿಯಾಗಿ ಸದ್ವಿನಯದ ಸಾಕಾರಮೂರ್ತಿಯಾದ ಮಹಾದೇವಿಯಕ್ಕ ಶರಣರ ಕೃಪೆಯಿಂದ ತಾನು ಚೆನ್ನಮಲ್ಲಿಕಾರ್ಜುನನ ಪಾದಕ್ಕೆ ಅರ್ಪಿತವಾದ ಬಗೆಯನ್ನು ಕೃತಾರ್ಥಭಾವದಿಂದ ನೆನೆಯುತ್ತಾಳೆ.

'ಅಯ್ಯಾ ನಿಮ್ಮ ಅನುಭವಿಗಳ ಸಂಗಮದಿಂದ ಎನ್ನ ತನುಶುದ್ದವಾಯಿತು' ಎಂದು ಹೇಳುತ್ತಾಳೆ.[೩]

ಚೆನ್ನಮಲ್ಲಿಕಾರ್ಜುನನ 'ಚೆನ್ನಸತಿ' ತಾನುಗುವಲ್ಲಿ ಶರಣರು ಕರುಣಿಸಿದ ಭಕ್ತಿಜ್ಞಾನ ಅನುಭಾವ ಪ್ರಸಾದವನ್ನು ಕೃತಜ್ಞತೆಯಿಂದ ನೆನೆಯುತ್ತಾಳೆ. ಶರಣರ ಸಂಗದಲ್ಲಿ ಷಟ್ಸ್ಥಲದ ಅನುಭವವನ್ನು ಸರ್ವಾಂಗದಲ್ಲಿ ಅಳವಡಿಸಿಕೊಂಡಿರುವ ಮಹಾದೇವಿಯಕ್ಕ ಪ್ರಭುವಿಗೆ ತನ್ನ ಲಿಂಗೈಕ್ಯದ ಸ್ಥಾನ, ಕಾಲ, ಸ್ಥಿತಿಗಳನ್ನು ತಿಳಿಸುವಂತೆ ವಿನಮ್ರಳಾಗಿ ಪ್ರಾರ್ಥಿಸುತ್ತಾಳೆ.

---

೧. ಅಕ್ಕನಮಹಾದೇವಿ-ಡಾ.ಶಾಂತಾ ಇಮ್ರಾಪೂರ-ಪುಟ-೨೨೭ (೨೦೦೧)

೨. ಅಕ್ಕನಮಹಾದೇವಿ-ಡಾ.ಶಾಂತಾ ಇಮ್ರಾಪೂರ-ಪುಟ-೨೨೭ (೨೦೦೧)

೩ ಅಕ್ಕನಮಹಾದೇವಿ-ಡಾ.ಶಾಂತಾ ಇಮ್ರಾಪೂರ (೨೦೦೧)

'ಲಿಂಗಾಂಗಸಲಿಗ ಸಮರದ ಸುಖದಲ್ಲಿ ಮನ ವೇದ್ಯವಾಯಿತು.
ಇನ್ನೇಲ್ಲಿಯಯ್ಯಾ ಎನಗೆ ನಿಮ್ಮಲ್ಲಿ ನಿರವಯವು?
ಇನ್ನೇಲ್ಲಿಯಯ್ಯಾ ಎನಗೆ ನಿಮ್ಮಲ್ಲಿ ಕೂಡುವುದು
ಪರಮಸುಖ ಪರಿಣಾಮ ಮನದ ಮೇರೆದಪ್ಪಿ
ನಾನು ನಿಜವನ್ನೈದುವಠಾವ ಹೇಳಾ ಚೆನ್ನಮಲ್ಲಿಕಾರ್ಜುನಾ.'[೧]

ಈ ವಚನದಲ್ಲಿ ಅಕ್ಕ ತಾನು ಚನ್ನಮಲ್ಲಿಕಾರ್ಜುನನಲ್ಲಿ ಐಕ್ಯವಾಗುವುದಕ್ಕೆ ಅಂಬಲಿಸುತ್ತಿರುವುದು. ಮನಸ್ಸು ಪರಮಸುಖವನ್ನು ಹೊಂದಿ ಮುಕ್ತಾತ್ಮನಾಗುವ ಸ್ಥಳವನ್ನು ತಿಳಿಸಿ ಗುರುವೆ ಎಂದು ಪ್ರಭುದೇವರನ್ನು ಈ ವಚನದಲ್ಲಿ ಮಾರ್ಗದರ್ಶನ ಮಾಡುವಂತೆ ಹೇಳುತ್ತಾಳೆ.

'ನೀ ನಾನೆಂಬುಭಯ ಸಂಗವಳಿದು
ತಾನು ತಾನಾದ ತ್ರಿಕೂಟವೆಂಬ ಮಹಾಗಿರಿಯ
ತುಟ್ಟ ತುದಿಯ ಮೆಟ್ಟಿ ನೋಡಲು.
ಬಟ್ಟ ಬಯಲು ಕಾಣಬಹುದು ನೋಡಾ'[೨]

ಎಂದು ಅಲ್ಲಮ್ಮ ಅಕ್ಕನಿಗೆ ಹೇಳುತ್ತಾನೆ. ಪ್ರಭುದೇವರ ನಿರ್ದೇಶನದಂತೆ ಮಹಾದೇವಿಯಕ್ಕ ಶ್ರೀಶೈಲಕ್ಕೆ ಹೊರಟು ನಿಲ್ಲುತ್ತಾಳೆ. "ಒಡಲಿಲ್ಲದ ನುಡಿಯಿಲ್ಲದ ಕಡೆಯಿಲ್ಲದ ನಲ್ಲನ ಒಡಗೂಡಿ ಪರಮ ಸತಿಯಾದ ಮಹಾದೇವಿಯಕ್ಕ' 'ಕಾಯವೆಂಬ ಕದಳಿ'ಯನು ದಾಟಿಭವಹರನಲ್ಲಿ ಬೆರತು ಒಂದಾಗುವ ತವಕದಿಂದ ಶ್ರೀಶೈಲದ ಕದಳಿಗೆ ಹೊರಟು ನಿಂತಾಗ ಶರಣರ ಕರುಣಿಯ ಕೂಸಾಗಿ, ಭಕ್ತಿ ಸುಜ್ಞಾನ-ಪಾರಮಾರ್ಥದ ತ್ರಿವಿಧಾಮೃತವನುಣಿಸಿ ಬೆಳೆಸಿದ ಮಹಾದೇವಿಯನ್ನು 'ಸಯವಪ್ಪಗಂಡ' ಚನ್ನಮಲ್ಲಿಕಾರ್ಜುನನ ಮನೆಗೆ ಶರಣರೆಲ್ಲರು"[೩] ಕಳುಹಿಸುತ್ತಾರೆ.

ಅಕ್ಕಮಹಾದೇವಿ ಅನುಭವಮಂಟಪದಲ್ಲಿ ಸಕಲ ಶಿವಶರಣರ ಮನ್ನಣೆಗೆ ಪಾತ್ರಳಾಗುತ್ತಾಳೆ. ಅಕ್ಕನ ಜೀವನದ ಚಾರಿತ್ರಿಕ ವಿವರಗಳು ಸ್ವಲ್ಪಮಟ್ಟಿಗೆ ದೊರಕಿರುವುದರಿಂದಲೂ ಆಕೆಯ ವಚನಗಳಲ್ಲಿ ಜೀವನದ ಬಹುಪಾಲು ಅಂಶಗಳು ವ್ಯಕ್ತವಾಗಿರುವುದರಿಂದಲೂ ಆಕೆ ತನ್ನ ಕಾಲಕ್ಕೆಹೇಗೆ ಪ್ರತಿಕ್ರಿಯಿಸಿದಳು. ಆ ಪ್ರತಿಕ್ರಿಯೆಯಲ್ಲಿ ನಾವು ಕಾಣಬಹುದಾದ ಹೊಸತನ ಯಾವುದು ಆಕೆ ಆ ಕಾಲಕ್ಕಷ್ಟೆ ಅಲ್ಲದೆ, ನಮ್ಮ ಕಾಲಕ್ಕೂ ತನ್ನ ವಿಶಿಷ್ಟ ಗ್ರಹಿಕೆಯ ಮೂಲಕ ಹೇಗೆ ಒಂದು ಸೋಜಿಗದಂತೆ ಕಾಣುತ್ತಾಳೆ ಎಂಬ ಪ್ರಶ್ನೆಗಳಿವೆ. ಅಕ್ಕನ ವಚನಗಳನ್ನೇ ಆಧಾರವಾಗಿಟ್ಟುಕೊಂಡು ಅವಳ ವ್ಯಕ್ತಿತ್ವವನ್ನು ಕಟ್ಟಿಕೊಳ್ಳಬಹುದು.

---

೧. ಅಕ್ಕನ ವಚನಗಳು ಸಂ.ಡಾ.ಎಲ್.ಬಸವರಾಜು-ವಚನ-೨೬೬- ಪುಟ-೧೩೬ (೧೯೬೬)

೨. ಅಕ್ಕನಮಹಾದೇವಿ-ಡಾ.ಶಾಂತಾ ಇಮ್ರಾಪೂರ-ಪುಟ-೨೩೧ (೨೦೦೧)

೩ ಅಕ್ಕಮಹಾದೇವಿ ವಚನಗಳು-ಸಾಂಸ್ಕೃತಿಕ ಮುಖಾಮುಖಿ-ಸಂ-ರಹಮತ್ ತರೀಕೆರೆ-ಪುಟ-೨೨(೨೦೦೫)

ಅಕ್ಕನ ದಿಗಂಬರತ್ವದ ಪ್ರಸ್ತಾವನೆತ್ತಿ ವಿಶದಗೊಳಿಸ ಹೊರಟ ಸಂಪಾದನೆಯ ಉದ್ದೇಶವೇನಾಗಿತ್ತು? ಅಕ್ಕನ ದಿಗಂಬರತ್ವವನ್ನು ತಾತ್ವಿಕಾವಗಿ ಸಮರ್ಥಿಸಿ, ವಿಷಾದಪಡಿಸುವುದರೊಂದಿಗೆ ಕೇಶಸೀರೆಯ ಮೇಲೆ ಹೆಚ್ಚಿನ ಒತ್ತುಕೊಟ್ಟು ಆ ದಿಗಂಬರತ್ವದೊಳಗೇ ಒಂದು 'ಅಂಬರತ್ವವಿತ್ತೆಂದು' ಒತ್ತಿ ಹೇಳುವುದಾಗಿತ್ತೆ? ಹಾಗೇ ಹೇಳುವ ಉತ್ಸಾಹದಲ್ಲಿ ಅಲ್ಲಮನಿಂದ ಪ್ರಶ್ನೆಗಳನ್ನು ಮೂಡಿಸಿದರು ಅಕ್ಕನಿಂದ ಸರ್ಮಥಕವಾಗಿ ಉತ್ತರ ಕೊಡಿಸಲಾಗದೆ ಹೋಯಿತು? ಅಕ್ಕ ಕೊಡುವ ಉತ್ತರ ಅಲ್ಲಮನಂಥ ಅನುಭಾವಿಯ ಅನುಭಾವಿಕತೆಯ ಸತ್ವವನ್ನ ತಕ್ಕ ರೀತಿಯಲ್ಲಿ ನೋಡದೆ ಹೋಗಬಹುದಾದ ಸಾಧ್ಯತೆಯನ್ನು ಗಮನಿಸಲಿಲ್ಲವೆ?

ಕಲ್ಯಾಣದಲ್ಲಿರುವರೆಲ್ಲ ಅಕ್ಕನನ್ನು ವಿಶೇಷ ಗೌರವದಿಂದ ಕಂಡರು. ಅಂತೆಯೇ ಶರಣರನ್ನು ಕುರಿತ ಮನತುಂಬಿದ ಕೃತಜ್ಞತೆ ಶೂನ್ಯ ಸಂಪಾದನೆಯ ಒಳ ಹೊರಗಿನ ವಚನಗಳಲ್ಲಿ ತುಂಬಿ ನಿಂತಿದೆ. ಬಸವಣ್ಣನ ಪಾದದ ಕಂಡೆನಾಗಿ ಎನ್ನಂಗ ನಾಸ್ತಿಯಾಯಿತು. ಪ್ರಭುವೆ ನಿಮ್ಮ ಶ್ರೀಚರಣಕ್ಕೆ ಶರಣೆಂದೆನಾಗಿ ಎನ್ನ ಅಣಿವು ಸ್ವಯವಾಯಿತ್ತು. ಚನ್ನಮಲ್ಲಿಕಾರ್ಜುನ ದೇವಯ್ಯ ನಿಮ್ಮ ಶರಣರ ಕರುಣವ ಪಡೆದೆನಾಗಿ ಎನಗೆ ಮುತ್ತಾವುದಿಲ್ಲವಯ್ಯ ಪ್ರಭುವೇ ಇಂತೀ ಅಸಂಖ್ಯಾತರೆಲ್ಲರೂ ತಮ್ಮ ಕರುಣದ ಕಂದನೆಂದು ತಲೆದಡಹಿ ರಕ್ಷಿಸಿದ ಕಾರಣ ಚನ್ನಮಲ್ಲಿಕಾರ್ಜುನನ ಪಾದಕ್ಕೆ ಯೋಗ್ಯಳಾದೆನು. ಇತ್ಯಾದಿ ಅಂತೆಯೇ ಅಕ್ಕನನ್ನು ಕುರಿತು ಶರಣರ ಗೌರವ ಮೆಚ್ಚುಗೆಗಳೂ ವ್ಯಕ್ತವಾಗಿದೆ.

ಅನುಭವಮಂಟಪದಿಂದ ಶ್ರೀಶೈಲಕ್ಕೆ ಹೋರಟ ಅಕ್ಕನಿಗೆ "ಆದಿಶಕ್ತಿ ಅನಾದಿಶಕ್ತಿಯೆಂಬುರು ಆದನಾರು ಬಲ್ಲರಯ್ಯ? ಆದಿ ಎಂದರೆ ಕರುಹಿಂಗೆ ಬಂದಿತ್ತು. ಅನಾದಿ ಎಂದರೆ ನಾಮಕ್ಕೆ ಬಂದಿತ್ತು. ಆದಿಯಲ್ಲಿ ಅನಾದಿಯಲ್ಲಿ ನಾಮವಿಲ್ಲದ ಸೀಮೆಯಿಲ್ಲದ ನಿಜಶಕ್ತಿ ಚಿಚ್ಛಕ್ತಿಯಾಯಿತು." "ನೋಡಾ ಅಂತರಂಗ ಪ್ರಭು ಬಹಿರಂಗವೆಲ್ಲಾ ತಾನೆಯಾಗಿ ಗುಹೇಶ್ವರಲಿಂಗದಲ್ಲಿ ಸಂದಿಲ್ಲದಿಪ್ಪ. ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎಂಬೆನು"[೧] ಅಕ್ಕನಿಗೆ ಅವಳ ವ್ಯಕ್ತಿತ್ವಕ್ಕೆ ನಮನಗಳನ್ನು ಸಲ್ಲಿಸುತ್ತಾನೆ.

---

೧. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ-ಬೆಂ.ವಿ.ವಿ.ನಿ-ಪುಟ-೧೪೩ (೧೯೭೭)

## ಅಧ್ಯಾಯ-3

# ಸಂವೇದನೆಯ ಸ್ವರೂಪ

ಸಂವೇದನೆಯ ಸ್ವೂರಪವನ್ನ ಹಲವಾರು ನೆಲೆಗಳಲ್ಲಿ ಕಾಣಬಹುದಾಗಿದೆ. ಬಂಡಾಯ ಸಾಹಿತ್ಯ ಕಾಲಘಟ್ಟದಲ್ಲಿ ದಲಿತ ಸಂವೇದನೆ. ಮುಸ್ತಿಂಸಂವೇದನೆ ಹಾಗೂ ಮಹಿಳಾ ಸಂವೇದನೆ ಎನ್ನುವ ಮಾತು ಇತ್ತೀಚಿನದಲ್ಲಿ, ಬಹಳ ಹಿಂದಿನಿಂದಲೂ ವೈಧಿಕ ಸಂಪ್ರಾದಯದಲ್ಲಿ ಅಂಚಿಗೆ ತಳಲ್ಪಟ್ಟಿದವರೆಲ್ಲರ ಸಂವೇದನೆ ಇದ್ದಾಗಿದೆ. ಹಾಗಾಗಿ ಅದರಲ್ಲಿಯೂ ಸ್ತ್ರೀ ಸಂವೇದನೆ ಮಾತು ಇತ್ತೀಚಿನವಾದರೂ ಸಂವೇದನೆ ಇತ್ತೀಚಿನದಲ್ಲಿ ಸಂವೇದನೆಯ ಸ್ವರೂಪ ಕಾಲಕಾಲಕ್ಕೆ ಬೇರೆ ರೀತಿಯಾಗಿರಬಹುದು. ಬೇರೆ ನೆಲೆಗಳಿಂದ ಪ್ರೇರಿತವಾಗಿರಬಹುದು. ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನಯನ್ನ ಈ ಹಿನ್ನಲೆಗಳಿಂದಲೂ ಗುರುತಿಸಬಹುದು. ಜನಪದ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ, ಪ್ರಾಚೀನ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ ವಚನಯುಗದಲ್ಲಿ ಸ್ತ್ರೀ ಸಂವೇದನೆ ಹಾಗೂ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಗಳನ್ನು ಕಾಣಬಹುದು.

ಮೊದಲಿಗೆ ಸಂವೇದನೆ ಎಂದರೇನು ಎಂಬುದನ್ನು ತಿಳಿಯಬೇಕಾಗಿದೆ. 'ಯಾವುದೇ ಅನುಭವಕ್ಕೆ ವ್ಯಕ್ತಿಯೊಬ್ಬನ ವಿಶಿಷ್ಟವಾದ ಭಾವನ್ಮಾಕ ಮತ್ತು ಬೌದ್ಧಿಕ ಪ್ರಕ್ರಿಯೆ' ಎಂಬ ಅರ್ಥ ಇನ್ನೂ ಸರಳವಾಗಿ ಹೇಳುವುದಾದರೆ 'ಮನುಷ್ಯನ ಭಾವನಾತ್ಮಕ ಮಾನವೀಯ ತುಡಿತಗಳೆಲ್ಲವು ಸಂವೇದನೆಯ ಧ್ವನಿ' ಯಾಗಿರುತ್ತದೆ. ಉದಾ: ತಾಯ್ತನ, ವತ್ಸಲ ಅಂತ:ಕರಣ, ನಿಘಂಟಿನಾರ್ಥದಲ್ಲಿ ಸಂವೇದನೆಗೆ ಅನಿಸಿಕೆ-ತಿಳುವಳಿಕೆ ಎಂದರ್ಥವಿದೆ. ಈ ಹಿನ್ನಲೆಯಲ್ಲಿ ಮೇಲೆ ತಿಳಿಸಿರುವಂಥ ಸಂವೇದನೆಯ ಸ್ವರೂಪವನ್ನು ಇನ್ನೂ ಸ್ಥೂಲವಾಗಿ ತಿಳಿಯಬಹುದು.

### 3.1 ಮಹಿಳಾ ಸಂವೇದನೆ:

ಬದುಕಿನ ಸ್ವರೂಪ, ಹಿನ್ನಲೆ, ಸಂಬಂಧಗಳ ಗ್ರಹಿಸುವಿಕೆಯು ಸಾಮಾಜಿಕ, ಸಾಂಸ್ಕೃತಿಕ ಸಂರಚನೆಯಲ್ಲಿನ ನಮ್ಮ ಬದುಕಿನ ನೆಲೆ, ವೈಯಕ್ತಿಕತೆ ಮತ್ತು ಆ ವೈಯಕ್ತಿಕತೆಯ ಭಾಗವೇ ಆದ ತಾತ್ವಿಕ ಒಳನೋಟಗಳನ್ನು ಸಂವೇದನೆ ಆಧರಿಸಿರುತ್ತದೆ. ಇವು ಕಾಲ, ಸಮಾಜ, ವ್ಯಕ್ತಿಗನುಸಾರವಾಗಿ ಬದಲಾಗುವುದರಿಂದ ಮೇಲೆ ಹೇಳಿದ ಗ್ರಹಿಸುವಿಕೆ ಕ್ರಮ, ರೀತಿ, ಜಗತ್ತಿನಲ್ಲಿ ಅಷ್ಟು ವಿಭಿನ್ನವಾಗಿದೆ. ನಮಗೆ ಕಾಣುವ ಪ್ರಪಂಚ ನಾವು ನಿಂತ ಜಾಗದಿಂದ ಕಾಣುವ ಪ್ರಪಂಚವೇ ಆಗಿದೆ.

ವೈದಿಕ ವರ್ಣ ವ್ಯವಸ್ಥೆಯ ತಾರತಮ್ಮ ನೀತಿ, ಧರ್ಮಶಾಸ್ತ್ರಗಳು ಹುಟ್ಟು ಹಾಕಿದ ಲಿಂಗ-ಜಾತಿ ರಾಜಕಾರಣ ಮತ್ತು ಪುರುಷ ಪ್ರಭುತ್ವದ ಏಕಾಂಗಿ ಚೌಕಟ್ಟಿನಲ್ಲಿ ಜಡಗೊಂಡಿದ್ದ ಭಾರತದ ಸಾಂಸ್ಕೃತಿಕ ರಚನೆಯನ್ನು ಮಾನವೀಕರಣಗೊಳಿಸುವ ಪ್ರಯತ್ನಗಳು ವೇದೋಪನಿಷತ್ತುಗಳ ಕಾಲದಿಂದಲೂ

ನಡೆದುಬಂದಿವೆ. ಇತಿಹಾಸದುದ್ದಕ್ಕೂ ಭಾರತೀಯ ಮಹಿಳೆ ಪ್ರಾಪಂಚಿಕ ಮತ್ತು ಪಾರಮಾರ್ಥಿಕ ನೆಲೆಗಳಲ್ಲಿ ತಿರಸ್ಕಾರ, ಅವಹೇಳನಕ್ಕೆ ಗುರಯಾಗುತ್ತ ಬಂದಿದ್ದಾಳೆ. ಇಂತ ಪರಿಸ್ಥಿತಿಯಲ್ಲಿ ಸಾಹಿತ್ಯದಲ್ಲಿ ಕೂಡ ಲಿಂಗಾಧರಿತ ಕಲ್ಪನೆ ಬಂದಿದೆ. ಇದು ಅಲ್ಲಿಯೂ ಪುರುಷನು ತನ್ನ ಶ್ರೇಷ್ಠತೆಯನ್ನು ಉಳಿಸಿಕೊಳ್ಳಲು ಮಾಡುವ ಪ್ರಯತ್ನವೇ? ಸಾಹಿತ್ಯ ಒಂದು ಸೃಜನಶೀಲ ಪ್ರಕ್ರಿಯೆ, ಆದರ ಆತ್ಮ ಹೆಣ್ಣೂ ಅಲ್ಲ, ಗಂಡೂ ಅಲ್ಲ. ಹೀಗಿದ್ದಾಗ ಸಾಹಿತ್ಯವನ್ನು ಕೇವಲ ಸಾಹಿತ್ಯವೆಂದು ಮಾತ್ರ ನೋಡಬೇಕೆ ಹೊರತು ಗಂಡು, ಹೆಣ್ಣು ನಿರ್ಮಿಸಿದ್ದು ಎಂಬ ಹಿನ್ನಲೆಯಲ್ಲಿ ಹುಡುಕಬಾರದು. ಸಾಹಿತ್ಯವನ್ನು ಅಳೆಯುವ ಮಾನದಂಡ ಮತ್ತೆ ಪುರುಷನ ಮುಖಾಂತರವೇ ಆಗಬೇಕಿಲ್ಲ. ಇದನ್ನು ಮಹಿಳಾ ಲೇಖಕಿಯರು ತಿರಸ್ಕರಿಸಬೇಕೆಂಬುದೇ ನನ್ನ ನಮ್ರವಾದ ವಿನಂತಿ, ಇಲ್ಲವಾದರೆ ಇನ್ನೊಂದು ಮೌಲ್ಯಾಧಾರಿತ ಸಂಸ್ಕೃತಿಗೆ ಅದು ನಾಂದಿಯಾಗಬಹುದು ಎಂದು ಹೆಚ್.ಎಸ್.ಮುಕ್ತಾಯಕ್ಕೆ ಮಹಿಳಾ ಲೇಖಕಿಯರಿಗೆ ತಿಳಿ ಹೇಳಿದ್ದಾರೆ.

ಅಕ್ಕನಂತಹ ಕವಿಯತ್ರಿ ಇದುವರೆಗೂ ಬಂದಿಲ್ಲ. ವಚನಕಾರ್ತಿಯರನ್ನೂ ಅಕ್ಕನನ್ನೂ ನೋಡಿದಾಗ, ಅವರ ಜನಪರ ನಿಲುವುಗಳನ್ನು ಆಧುನಿಕ ಮಹಿಳಾ ಸಾಹಿತಿಗಳು ಗಮನಿಸಬೇಕಾದುದು ಅವಶ್ಯಕವಾಗಿದೆ. ವೈಯಕ್ತಿಕ ನೋವುಗಳನ್ನು ಸಾರ್ವತ್ರಿಕಗೊಳಿಸುವುದು ಮತ್ತು ಆ ವೈಯಕ್ತಿಕ ನೋವನ್ನು ಮೆಟ್ಟಿ ಜನಪರ ಕಾಳಜಿಗಳತ್ತ ಹೆಚ್ಚು ಗಮನ ಹರಿಸುವುದು ಸಮಾನಾಂತರವಾಗಿಯೇ ಆಗಬೇಕಾಗಿದೆ. ಆದ್ದರಿಂದಲೇ ವಚನಕಾರ್ತಿಯರ ಆಶಯಗಳು ಇಂದಿಗೂ ಪ್ರಸ್ತುತ ಎನ್ನಿಸುತ್ತದೆ. ಸ್ತ್ರೀವಾದವು ಜಾಗತಿಕ ಮಟ್ಟದಲ್ಲಿ ನಡೆಯುತ್ತಿರುವುದು ಹಾಗೂ ಅಲ್ಪಸಂಖ್ಯಾತರದ ಮುಸ್ಲಿಂ ಸಂವೇದನೆ ಹಾಗೂ ದಲಿತರ ಚಳುವಳಿಗಳನ್ನ ಕಾಣುತ್ತಿರುವುದು ಒಂದು ಉತ್ತಮ ಆರೋಗ್ಯಕರ ಸಮಾಜವನ್ನ ಕಟ್ಟುವ ಕೆಲಸವಾಗಬೇಕು.

ಎಲ್ಲಾ ವರ್ಗದಲ್ಲಿ ಸ್ತ್ರೀಯರು ಒಂದಲ್ಲ ಒಂದು ರೀತಿಯಲ್ಲಿ ಶೋಷಣೆಯಿಂದ ನರಳುತ್ತಿದ್ದಾರೆ. ಹೆಣ್ಣು ಸ್ವಾತಂತ್ರವನ್ನು ಬಯಸುವಳೆಂಬುದು ಹಲವರಿಗೆ ಸ್ವೇಚ್ಛೆಯಲ್ಲಿ ಲಂಪಟನದ ಎಂದು ಅರ್ಥವಾಗಿದೆ. ಆದರೆ ಇದು ತಪ್ಪ ತಿಳುವಳಿಕೆ, ಸ್ವಾತಂತ್ರವೆಂದರೆ ಸ್ವೇಚ್ಛೆಯಲ್ಲಿ, ನಿಭಿಗತಿಯಿಂದ ತಮ್ಮ ಅಸ್ತಿತ್ವವನ್ನು ರೂಪಿಸಿಕೊಂಡು ಮಾನವೀಯ, ನೆಲೆಗಳಲ್ಲಿ ಬದುಕುವುದೇ ಆಗಿದೆ. ಮುಸ್ಲಿಂ ಸಾಹಿತ್ಯದಲ್ಲಿಯೂ ಮಹಿಳೆ ಶೋಷಣೆ, ಹಿಂಸೆ, ಬಂಧನಗೊಳಲ್ಪಟ್ಟಿರುವ ಸಂವೇದನೆಗಳನ್ನ ಕಾಣುತ್ತಿರುತ್ತೇವೆ. ಇಂತಹ ಚಿತ್ರಣವನೊಳಗೊಂಡ ಸಾರ ಅಬುಬಕ್ಕರ್‌ರವರ ಸಾಹಿತ್ಯ ರಚನೆಯನ್ನ ನೋಡಿದ ಸಂದರ್ಭದಲ್ಲಿ ಅವರ ಕಥಾವಸ್ತು ಮಹಿಳೆಯೇ ಆಗಿರುತ್ತಾಳೆ. ಹಾಗಯೇ ದಲಿತರಲ್ಲಿ ಬರುವ ಹೆಣ್ಣಮಕ್ಕಳ ಚಿತ್ರಣವು ಅಷ್ಟೆ ಶೋಷಣೆಯಿಂದ ಕೂಡಿರವಂತದ್ದು ಕುವೆಂಪುರವರ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಆ ವರ್ಗದ ಹೆಣ್ಣುಮಕ್ಕಳ ಚಿತ್ರಣವನ್ನ ಕಾಣಬಹುದಾಗಿದೆ. ಯಾವುದೇ ವರ್ಗವಾಗಿರಲ್ಲಿ ಶೋಷಣೆಯ ಕೇಂದ್ರ ಬಿಂದು ಮಹಿಳೆಯಾಗಿರುತ್ತಾಳೆ.

ಇದು ನಾವು ಕಾಣುತ್ತಿರುವ ಸಮಾಜ ಕನ್ನಡ ಸಾಹಿತ್ಯದಲ್ಲಿ ಮೊದಲಿಗೆ ಜನಪದ ಸಾಹಿತ್ಯ ಪ್ರಾಚ್ಯ ಸಾಹಿತ್ಯ, ಆಧುನಿಕ ಸಾಹಿತ್ಯದ ಹಿನ್ನಲೆಯಲ್ಲಿ ಸ್ತ್ರೀ-ಸಂವೇದನೆ ಸೂಕ್ಷ್ಮವಾಗಿ ಕಾಣುವ ಉದ್ದೇಶವಾಗಿದೆ. ವಾನು ನೋಡಬೇಕಾಗಿರುವುದು ಸ್ಥೂಲವಾಗಿ ವಚನ ಸಾಹಿತ್ಯದಲ್ಲಿ, ಆದುದ್ದರಿಂದ ಇವುಗಳನ್ನು

ಸೂಕ್ಷ್ಮವಾಗಿ ಕಾಣವುದು ಉತ್ತಮ. ಜನಪದ ದಾರಿ ದೀರ್ಘವಾಗಿದೆ. ಆ ಸಮಾಜದ ಅಭ್ಯಾಸವೆಂದರೆ ಒಂದು ಜನಾಂಗದ ಅಭ್ಯಾಸವೇ ಸರಿ. ಜನಪದ ಕವಿಗಳು ಅಕ್ಷರಜ್ಞಾನಿಗಳಲ್ಲದಿದ್ದರೂ ಆಶು ಕಾವ್ಯದ ಮೂಲಕ ತಮ್ಮ ಇಡೀ ಬದುಕನ್ನು ತೆರಿದಿಟ್ಟಿದ್ದಾರೆ. ಒಂದು ಜನಪದ ರೂಪುಗೊಳ್ಳವಾಗಲೇ ಅದರೊಡನೆ ನೋವು, ನಲಿವು, ಹಿಂಸೆ, ಆಚಾರ, ವಿಚಾರ ರೂಪುಗೊಳ್ಳುತ್ತವೆ. ಸಾಮಾಜಿಕ ಮೌಲ್ಯಗಳು ಪೂರ್ವನಿಯೋಜಿತವಾದವು. ಇವು ಅಷ್ಟು ಸುಲಭವಾಗಿ ಬದಲಾವಣೆಯಾಗುವುದಿಲ್ಲ. ಜನಪದ ಹೆಣ್ಣಿಗೆ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಯಾವ ಸ್ವಾತಂತ್ರ್ಯವೂ ಇರುವುದಿಲ್ಲ, ಆ ಒಂದು ಚೌಕಟ್ಟನ್ನು ದಾಟಿ ಬರುವುದು ಆಕೆಗೂ ಸಾಧ್ವಿರಲಿಲ್ಲ. ಶೀಲಾ, ಪಾತಿವ್ರತ್ಯ, ಬಲಿದಾನ, ತಾಳ್ಮೆ ಮುಂತಾದ ಭಾವನಾತ್ಮಕ ಅಂಶಗಳು ಇವರ ಬದುಕನ್ನು ಆಳುತ್ತಿದ್ದವು. ಅವೇ ಅವರಿಗೆ ಜೀವ ವಿರೋಧಿಯೂ ಆಗಿದ್ದವು. ಪ್ರಗತಿ ವಿರೋಧಿಯಾದ ಈ ಮೌಲ್ಯಗಳು ಆಗ ಸರ್ವಮಾನ್ಯತೆ ಪಡೆದು ವಿಜೃಂಭಿಸುತ್ತಿದ್ದವು. ಏನನ್ನು ಪ್ರಶ್ನಿಸುವ ಹಕ್ಕನ್ನು ಪಡೆಯದ ಹೆಣ್ಣು ಕೆರೆಕಟ್ಟೆಗೆ ಹಾರವಾಗಿ, ಸೆರೆಹೋಗಿ, ಅತ್ತೆಮಾವನ ಕೈಯಲ್ಲಿ ಸಾಯುವುದುದ, ಮಕ್ಕಳಿಲ್ಲದೆ ಕಾಲಕಸಕ್ಕಿಂತ ಕಡೆಯಾಗಿ ವಿಧವೆಯಾಗಿ, ದೇವರ ಹೆಸರಿನಲ್ಲಿ ದೇವದಾಸಿಯಾಗಿ ಬದುಕಿದ್ದಾಳೆ.

ಈ ಸಾಹಿತ್ಯದಲ್ಲಿ ಎದ್ದು ಕಾಣುವ ಅಂಶವೆಂದರೆ ಹೆಣ್ಣು ಬಹುಪಾಲು ಪುರುಷರಿಂದ, ಕೆಲವಾರು ಬಾರಿ ಹೆಣ್ಣಿನಿಂದಲೇ ಶೋಷಣೆಗೆ ಒಳಗಾಗಿದ್ದಾಳೆ. ತಿಳಿದೋ, ತಿಳಿಯದೆಯೋ ಪ್ರಗತಿ ವಿರೋಧಿ ಮೌಲ್ಯಗಳಿಗೆ ತನ್ನನ್ನು ತಾನು ಒಡ್ಡಿಕೊಂಡು ವೈಭವೀಕರಿಸಿಕೊಂಡಿದ್ದಾಳೆ. ಮತ್ತು ತನ್ನನ್ನೇ ತಾನು ಕೀಳಾಗಿ ಕಂಡುಕೊಂಡಿದ್ದಾಳೆ. ಗಂಡಿನ ದೌರ್ಜನ್ಯ, ಲೈಂಗಿಕ ಸ್ವೇಚ್ಚಾಚಾರವನ್ನು ಅದೊಂದು ಅನಿವಾರ್ಯವೆಂಬಂತೆ ಒಪ್ಪಿಕೊಂಡಿದ್ದಾಳೆ. ಸತಿ ಪದ್ದತಿಯಂತೆ ಕೊಂಡವೇರಲು ಸಿದ್ದಳಾದಾಗ ತನ್ನ ಮನದ ಮಾತನ್ನು ಈ ರೀತಿಯಾಗಿ ಅಭಿವ್ಯಕ್ತಪಡಿಸುವಳು.

'ಗಂಡ ಸಾಯೋಕಿಂತ ಮುಂಡ್ಯಾಗೋಕಿಂತ
ಕಂಡವರ ಮನೆಯ ಕನಸನ್ನಾಕಿ ಸಾಯೋಕಿಂತ
ಕೊಂಡವನ್ನೋದ ಕಡುಲೇಸು.'[೧]

ಹೆಣ್ಣಿನ ಅಸ್ತಿತ್ವವನ್ನು ಇಂದಿಗೂ ಕೂಡ ಗಂಡನೊಡನೆ ಸಂಯೋಜಿಸಲಾಗಿದೆ. ಸ್ವತಂತ್ರ ಅಸ್ತಿತ್ವದ ಕೊರತೆಯನ್ನು ಇಂದಿಗೂ ಕಾಣಬಹುದು. ಹೆಣ್ಣು ಮದುವೆಯಾಗಿ ಹೋಗುವಾಗ ಆಕೆಗೆ ನಾನಾರೀತಿಯಾದ ಉಪದೇಶವನ್ನು ಹೇಳಲಾಗುತ್ತಿತ್ತು. ಇವೆಲ್ಲ ಅಭದ್ರ ಅಸ್ಥಿರತೆಯನ್ನು ಸೂಚಿಸುವುದಲ್ಲದೆ ಗಂಡನ ಮನೆಯ ಬಗೆಗೆ ಭಯವನ್ನು ಬಿತ್ತುತ್ತಿದ್ದವು.

'ಅತ್ತಿಯ ಮನಿಯಾಗ ಮುತ್ತಿನ್ಹಾಂಗಿರಬೇಕು, ಹೊತ್ತಾಗಿ ನೀಡಿದರೆ ಉಣಬೇಕು'[೨] ಎಂದು ಹೇಳುವುದರ ಮೂಲಕ ನಮ್ಮ ಮನೆಗೆ ಹೆಸರನ್ನ ತರಬೇಕು ಎಂದು ಹೇಳುವುದರಲ್ಲಿ ಅವರು

೧. ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ-ಎಚ್.ಎಸ್.ಮುಕ್ತಾಯಕ್ಕ-ಪುಟ-೩ (೧೯೯೭)
೨. ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ-ಎಚ್.ಎಸ್.ಮುಕ್ತಾಯಕ್ಕ-ಪುಟ-೪ (೧೯೯೭)

ಕೊಡುವಂತಹ ಎಲ್ಲಾ ಕಷ್ಟಗಳನ್ನ ಸಹಿಸಿಕೊಂಡು ನಮಗೆ (ತವರಿಗೆ) ಹೆಸರು ತರಬೇಕು ಎನ್ನುವ ಸಂವೇದನೆ ವ್ಯಕ್ತಗೊಳ್ಳುತ್ತದೆ. ತನ್ನದಾಗುವ ಮನೆಯಲ್ಲಿ ಆಕೆಗೆ ಸ್ವಾತಂತ್ರ್ಯ, ಅಸ್ತಿತ್ವನ್ನೇ ನಿರಾಕರಿಸಲಾಗಿದೆ. ಎರಡೂ ಮನೆಗೆ ಹೆಸರು ತರುವ ಗುರುತರ ಜವಾಬ್ದಾರಿ ಆಕೆಯವಾಗಿರತ್ತದೆ.

ಗಂಡನೇ ಮಗಳಿಗೆ ಮುಳ್ಳಾದಾಗ, ಮಗಳ ದುಸ್ಥಿತಿ ತವರು ಮನೆಗೆ ಗೊತ್ತಾದಾಗ ಅವರೂ ಅಸಹಾಯಕರು. "ಮಲ್ಲಿಗೆಯಂಥಾ ಮಗಳಿಗೆ ಎಲ್ಲತೋ ಒಗೆತನ"[೧] ಮಲ್ಲಿಗೆಯಂತಹ ಮಗಳಿಗೆ ಯಾಗಗತಿ ಬಂದರೂ ತವರಿನವರು ಆಕೆಯನ್ನು ಕರೆದು ತಂದು ತಮ್ಮಲ್ಲಿ ಇಟ್ಟುಕೊಳ್ಳಲು ಸಿದ್ದವಾಗುವುದಿಲ್ಲ. ವರದಕ್ಷಿಣಿಯ ಸಾವು ಆತ್ಮಹತ್ಯೆ ಇತ್ಯಾದಿ, ಎರಡೂ ಕಡೆಗೆ ನಿರಾಕರಿಸಿ ಸ್ವತಂತ್ರವಾಗಿ ಬದುಕುವ ಅವಕಾಶದಿಂದಲೂ ಆಕೆ ವಂಚಿತಳಾಗಿದ್ದಳು, ಜನಪದದಲ್ಲಿ ಕಂಡುಬರುವ ಉತ್ತಮವಾದ ಸಂವೇದನೆಯ ಒಳ ಧ್ವನಿಯನ್ನೇ ಇಲ್ಲಿ ಗಮನಿಸಬಹುದು.

'ಸಾವಿರ ಕೊಟ್ಟರೂ ಸವತೀಯ ಮನಿಬ್ಯಾಡ
ಸಾವಿರ ಮ್ಯಾಲ ಐನೂರು! ಕೊಟ್ಟರೂ
ಮಲಮಕ್ಕಳಿರುವ ಮನಿಬ್ಯಾಡಾ'[೨]

ಈ ಸವತಿ ಮಾತ್ಸರ್ಯ ಗಂಗೆ, ಗೌರಿಯನ್ನು ಬಿಟ್ಟಿಲ್ಲ, ಶಿವ ತನ್ನ ಮೇಲೆ ಗಂಗೆಯನ್ನು ತಂದಿರುವನೆಂದು ಗೌರಿ ತವರು ಮನೆಗೆ ದೂರನ್ನು ಒಯ್ಯುತ್ತಾಳೆ. ಇಂತಹ ಗಂಡನ ಮದುವೆಯಾಗುವುದಕ್ಕೆ ಹೆಣ್ಣುಮಕ್ಕಳು ಇಷ್ಟಪಡುತ್ತಿರಲಿಲ್ಲ.

ಪತಿಯೇ ಪರದೈವನಾದಾಗ ಆತ ಹೇಳಿದ್ದೇ ಕೊನೆಯ ಮಾತಾಗುತ್ತಿತ್ತು. ಊಳಿಗಮಾನ್ಯ, ಯಜಮಾನ್ಯ ಸಂಸ್ಕೃತಿಯ ಲಕ್ಷಣವಿದು, ಗಂಡ ಏನೇ ಮಾಡಿದರೂ ಎದುರುತ್ತೆರ ಕೂಡದ, ಬುದ್ದಿ ಹೇಳದೇ ಇರುವಂಥಾಕಿಯೇ ನಿಜವಾದ ಹೆಂಡತಿ, ಗರತಿಯಾಗುತ್ತಿದ್ದುಳು. ಪುರುಷವರ್ಗಕ್ಕೆ ಸಂಗಾತಿಬೇಕಾಗುವುದಿಲ್ಲ ಗುಲಾಮರು ಬೇಕು, ಆದರೂ ಒಮ್ಮೆಮ್ಮೆ ಬಾಯ್ತಪ್ಪಿ ಅಂದಾಗ

'ಛೀ ಏಳೆ ಛೀಮಾರಿ ನಾಚಿಕೆಯಿಲ್ಲದ ನಾರಿ
ಗಂಡಗ ಬಯ್ದಗಯ್ಯಾಳಿ! ಗಂಡಾಗ
ಅರಿವಾ ಇಂದಾ ಎಂದು ಕರೆದಾಳ!'[೩]

ಎಂದು ಆಕೆಯನ್ನು ವಿರೋಧಿಸಲಾಗಿದೆ. ತಪ್ಪ ತಿದ್ದುವುದಿರಲಿ ಅವಾ ಇವಾ ಎಂದು ಕೂಜ ಅನ್ನಬಾರದು, ಮಾತಿನಲ್ಲಿಯು ಮುಕ್ತ ಸ್ವತಂತ್ರ್ಯವಿರಲಿಲ್ಲ. ಮಹಿಳಾಗೆ ಮಾತಿನ ಒಂದು ಚೌಕಟ್ಟಿಲ್ಲಿ ಬದುಕಬೇಕಾಗಿತ್ತು ಮಹಿಳೆ.

---

೧. ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ-ಎಚ್.ಎಸ್.ಮುಕ್ತಾಯಕ್ಕ-ಪುಟ-೭ (೧೯೯೭)
೨. ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ-ಎಚ್.ಎಸ್.ಮುಕ್ತಾಯಕ್ಕ-ಪುಟ-೭ (೧೯೯೭)
3. ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ-ಎಚ್.ಎಸ್.ಮುಕ್ತಾಯಕ್ಕ-ಪುಟ-೧೧ (೧೯೯೭)

ಒಟ್ಟಿನಲ್ಲಿ ಜನಪದ ಸಾಹಿತ್ಯವನ್ನು ನೋಡಿದಾಗ ಅನೇಕ ರೀತಿಯ ಸ್ತ್ರೀ ಸಂವೇದನೆಗಳು ಸಿಗುತ್ತದೆ. ಜನಪದ ಹೆಣ್ಣನ್ನು ತ್ಯಾಗಿ, ಉದಾರಿ ಎಂದು ಕರೆದು ಹೊಗಳುವುದು ಕೆರೆಗೆ ಹಾರ ಕಥನ ಗೀತದಲ್ಲಿ ಭಾಗೀರತಿಯನ್ನು ಕೆರೆಗೆ ಹಾರಕೊಡಲು ನಿರ್ಧರಿಸಿದಾಗ ಗಂಡ ಮಹಾದೇವ ದಂಡಿನಲ್ಲಿರುತ್ತಾನೆ. ಭಾಗೀರತಿಯ ಇಷ್ಟಕಷ್ಟಗಳನ್ನು ಯಾರು ಕೇಳುವುದಿಲ್ಲ. ಸ್ತ್ರೀಸಂವೇದನೆ ಒಂದು ಉತ್ತಮವಾದ ಜನಪದ ಧ್ವನಿಯನ್ನು ಕಾಣಬಹುದು.

'ಹೆಣ್ಣು ಆಗುವುದಕ್ಕಿಂತ ಮಣ್ಣು ಆಗೋದುಲೇಸು
ಮಣ್ಣಿನ ಮ್ಯಾಲ ಮರವಾಗಿ ಇದ್ದರ
ಬಂದವರಿಗೆಲ್ಲ ನೆರಳವ್ವ' [೧]

ಇಲ್ಲಿ ಹೆಣ್ಣುತನದ ನೋವನ್ನು ಕಾಣಬಹುದಾಗಿದೆ. ಹೆಣ್ಣಾಗಿ ಈ ಭೂಮಿಯಲ್ಲಿ ಜನ್ಮತಾಳುವ ಬದಲು ಮಣ್ಣಾಗುವುದು, ಮಣ್ಣಿನಲ್ಲಿ ಮರವಾಗಿ ಹುಟ್ಟಿನಲ್ಲಿ ನನ್ನ ಜನ್ಮ ಎಂದು, ಹೆಣ್ಣಾಗಂತು ಬೇಡ ಎನ್ನುವ ನೋವಿನ ಭಾವವನ್ನ ಕಾಣುತ್ತೇವೆ. ಇಂತಹ ಧ್ವನಿಗಳಿಗೆ ಉತ್ತರವನ್ನು ಕೊಟ್ಟ ಮೊದಲ ಹೋರಾಟದ ದಿಟ್ಟ ಮಹಿಳೆ ಅಕ್ಕಮಹಾದೇವಿ.

ಹಾಗೆಯೇ, 'ಪ್ರಾಚೀನ ಮಧ್ಯಕಾಲದಲ್ಲಿ ಮಹಿಲಾ ಸಂವೇದನೆ ಹೇಗಿತ್ತು ಎಂಬುವುದಕ್ಕೆ ಮೂಲಭೂತವಾಗಿ ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣು ಮನುವಿನ ಮನೋಧರ್ಮಕ್ಕೆ ಅನುಸಾರವಾಗಿ ಇದ್ದರಿಂದ ಆಕೆಯ ಬೌದ್ಧಿಕ ವ್ಯಕ್ತಿತ್ವ ಅರಳಲೇ' [೨] ಇಲ್ಲ. ಆಕೆ ಸಿದ್ದ ಪಾತ್ರದಲ್ಲಿ ಹೆಣ್ಣು ಕಾಣಿಸಿಕೊಳ್ಳುತ್ತಾಳೆಯೇ, ಹೊರತು ಆಕೆ ಹೆಣ್ಣಾಗಿ ಅರಳಿರವುದು ತುಂಬ ವಿರಳವಾಗಿದೆ. ಜೈನ ಕಾವ್ಯಗಳ ಪ್ರಕಾರ ಹೆಣ್ಣು ಪುರುಷನನ್ನು ತನ್ನ ಸಚ್ಚಾರಿತ್ರ್ಯದಿಂದ ಗೆದ್ದು ಅವನನ್ನು ಸಂಸಾರಕ್ಕೆ ಹಿಡಿದಿಡಬೇಕು. ಅದನ್ನು ದಾಟಿದವನೇ ನಿಜವಾದ ಯೋಗಿ, ಇಲ್ಲವೇ ಅವಳ ಚರಿತ್ರಹೀನ ನಡವಳಿಕೆಗೆ ಹೇಸಿ ಅವನು ಸಂಸಾರ ತ್ಯಾಗ ಮಾಡುವಂತೆಯೂ ಪ್ರೇರೇಪಿಸಬಹುದು. ಅಂತೂ ಪುರುಷನ ಇಹದ ಬಂಧನಕ್ಕೆ ಹೆಣ್ಣೇ ಕಾರಣ ಎಂಬ ತಾತ್ವಿಕ ನಿಲವು ಜೈನ ಕಾವ್ಯಗಳಿಂದ ವ್ಯಕ್ತವಾಗುತ್ತದೆ.

ಪ್ರಾಚೀನ ಜೈನ ಕಾವ್ಯಗಳಲ್ಲಿ ಹೆಣ್ಣು ಗಂಡಿಗೆ ಉದ್ದಾರದ ಮೆಟ್ಟಿಲಾಗಿ ತುಳಿಯಲ್ಪಟ್ಟು ಸವೆದು ಹೋಗಿದ್ದಾಳೆ. ಅಮೃತಮತಿಯಂತೆ ಕಳಂಕಿನಿಯ ಪಾತ್ರವನ್ನು ನಿರ್ವಹಿಸಬೇಕಾಗುತ್ತದೆ. ಜನ್ನನ 'ಯಶೋಧರಚರಿತೆ'ಯಲ್ಲಿ ಅಮೃತಮತಿ ಮತ್ತು ಅಷ್ಟಾವಂತ ಇವರ ಪ್ರಯಣ ಪ್ರಸಂಗವು ವಿವಾಹೋತ್ತರ ಲೈಂಗಿಕ ಸಂಬಂಧವುಳ್ಳ ಒಂದು ಸಂಕೀರ್ಣ ಸನ್ನಿವೇಶವಾಗಿದೆ. ಇಲ್ಲಿ ಹೆಣ್ಣಿಗೆ ಲೈಂಗಿಕ ಸ್ವಾತಂತ್ರ್ಯವಿಲ್ಲ ತನ್ನ ಗಂಡನಿಂದಲೇ ಪಡೆಯಬೇಕೆ ವಿನಹ ಪರಪುರುಷರಿಂದ ಇಲ್ಲ. ಆದರೆ ಪುರುಷನಿಗೆ ಈ ಚೌಟಕಟ್ಟು ಬರುದಿಲ್ಲ. ಅವನಿಗೆ ಸಮಾಜದಲ್ಲಿ ಯಾವುದೇ ಕಳಾಂಕಿತ ಪಟ್ಟ ದೊರೆಯುವುದಿಲ್ಲ. ಆದರೆ ಮಹಿಳೆಗೆ

---

೧. ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ-ಎಚ್.ಎಸ್.ಮುಕ್ತಾಯಕ್ಕ-ಪುಟ-೨೦ (೧೯೯೭)

೨. ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ-ಎಚ್.ಎಸ್.ಮುಕ್ತಾಯಕ್ಕ-ಪುಟ-೨೧ (೧೯೯೭)

ಎಲ್ಲಾ ರೀತಿಯ ಕಳಾಂಕೀತ ಪಟ್ಟವನ್ನೇ ಕಟ್ಟುತ್ತಾರೆ. ಮಹಿಳಾ ವಿಮೋಚನೆಗೆ ಇದೂ ಒಂದು ಪ್ರಮುಖ ಅಂಶವಾಗಬಹುದು.

'ಪೆಣ್ಣಲ್ಲವೆ ತಮ್ಮನ್ನೆಲ್ಲ ಪಡೆದ ತಾಯಿ
ಪೆಣ್ಣಲ್ಲವೆ ತೊರೆದಳು
ಪೆಣ್ಣು ಪೆಣ್ಣಂದೇಕೆ ಬೀಳುಗಳೆವರು
ಕಣ್ಣು ಕಾಣದ ಗಾವಿಲರು'

ಎಂದು ನುಡಿದಿರುವ ಹೊನ್ನಮ್ಮ ಮುಂದುವರೆದಂತಹ ಸಮಾಜದಲ್ಲಿ ಅನೇಕ ಸುಧಾರಣೆಗಿದ್ದರೂ ಕಣ್ಣು ಕಾಣದಗಾವಿಲರು ಈಗಲೂ ಇದ್ದಾರೆ. ಸ್ತ್ರೀವಾದಿಗಳು ಹೊನ್ನಮ್ಮನ ಈ ಮಾತನ್ನು ಇಟ್ಟುಕೊಂಡು ಗಾವಿಲರ ಕಟ್ಟು ತೆರೆಸಬೇಕಾಗುತ್ತದೆ. ಹೆಣ್ಣು ಹೆಣ್ಣೆಯ ಬಯ್ಯುವವರನ್ನು ಕಣ್ಣು ಕಾಣದ ಗಾವಿಲರೆಂದು ತನ್ನ ಮನದಾಳದ ಸಿಟ್ಟನ್ನು ವ್ಯಕ್ತಪಡಿಸಿದ್ದಾಳೆ.

ಮಧ್ಯಕಾಲೀನ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯು ನೆಲೆಗಳ ಸ್ವರೂಪವನ್ನು ಚರ್ಚಿಸುವ ಸಂದರ್ಭದಲ್ಲಿ ಸ್ತ್ರೀಯರ ಸ್ಥಾನಮಾನಗಳ ಸ್ವೂರೂಪವನ್ನು ಅರಿಯುವುದು ಅತ್ಯಗತ್. ಸ್ತ್ರೀಯರ ಸ್ಥಾನಮಾನಗಳು ಅವರ ಸಂವೇದನಾ ಸ್ವರೂಪವನ್ನು ನಿರ್ಧರಿಸುತ್ತವೆ. ಮಧ್ಯಕಾಲದ ಸಮಯದ ಭಕ್ತಿಪಂಥದ ಚಳುವಳಿಯಿಂದಾಗಿ ಹೆಣ್ಣಿಗೆ ವಿದ್ಯೆಯ ಅವಕಾಶ ದೊರೆಯಿತು. ರಾಜಮನೆತನಗಳು ಅದರಲ್ಲೂ ಕರ್ನಾಟಕದಲ್ಲಿ ಹೆಣ್ಣನ್ನು ಉದಾರವಾಗಿ ನಡೆಸಿಕೊಂಡರು. ಇದರ ಪರಿಣಾಮವಾಗಿ ಮಧ್ಯಕಾಲೀನ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪದಲ್ಲಿಯೂ ಬದಲಾಯಿತು. ಮಧ್ಯಕಾಲದ ಭಾರತೀಯ ಪರಿಸರದಲ್ಲಿ ಸ್ತ್ರೀಯು ಸಾಹಿತ್ಯ ಸಂಧಿಯಲ್ಲಿ ಜ್ಞಾನವನ್ನು ಸಂಪಾದಿಸುವುದರಲ್ಲಿ ಸ್ವಾತಂತ್ರ್ಯಗಳಿಸಿದ್ದಳು. ಆದರೆ ಈ ಕಾಲದಲ್ಲಿ ಮಹಿಳೆಯರಿಂದ ಸೃಷ್ಟಿಯಾಗಿದ್ದು ಭಕ್ತಿ ಅನುಭಾವ ಧಾರ್ಮಿಕ ಸಾಹಿತ್ಯ ಎಂದು ನಾವು ಕರೆಯಬಹುದಾದರೂ ಆ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ನೆಲೆಗಳು ದಟ್ಟವಾಗಿವೆ.

ಹನ್ನೆರಡನೆ ಶತಮಾನವು ಕನ್ನಡ ಸಾಹಿತ್ಯ ರಚನೆಯಲ್ಲಿ ಒಂದು ಪ್ರಮುಖ ಪ್ರಗತಿಪರ ಘಟ್ಟ. ಸಾಮಾಜಿಕ ಸುಧಾರಣೆಯ ಸಂದರ್ಭದಲ್ಲಿ ಸೃಷ್ಟಿಯಾದ ವಚನ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ನೆಲೆಗಳು ಕಾಣಿಸಿಕೊಂಡು ಎಲ್ಲಾ ವರ್ಗದ ಸ್ತ್ರೀಯರೂ ಸಾಹಿತ್ಯ ಸಂವೇದನೆಯಲ್ಲಿ ತೊಡಗಿಕೊಂಡಿದ್ದು ಪ್ರಮುಖವಾದ ಘಟನೆ. ಈ ಕಾಲದಲ್ಲಿ ಹೆಣ್ಣು ಗಂಡು ಎಂಬ ಭೇದವನ್ನು ಅಳಿಸಿ ಹಾಕಲು ಪ್ರಯತ್ನಿಸಲಾಗಿಯಿತು. ಸ್ತ್ರೀಯರಿಗೆ ಆತ್ಮ ವಿಶ್ವಾಸವನ್ನು ಸಮಾನತೆಯನ್ನು ಅಭಿವ್ಯಕ್ತಿಯ ಅವಕಾಶವನ್ನು ಒದಗಿಸಿದ್ದು ಬೇಡರ ದಾಸಿಮಯ್ಯ ಹೆಣ್ಣು ಮತ್ತು ಗಂಡಿನ ಕಂಡ ಬಗೆ ಇರುವ ಅಭಿಪ್ರಾಯವನ್ನೆ ವ್ಯಕ್ತಪಡಿಸುವಲ್ಲಿ ಹನ್ನೇರಡನೆ ಶತಮಾನವು ಹೆಣ್ಣನ್ನು ಕಂಡ ಬಗೆ. ಇದರಿಂದಾಗಿ ಗಂಡಿನ ಜೊತೆಗೆ

ಸರಿಸಮಾನವಾದ ಆಧ್ಯಾತ್ಮಿಕ ಸ್ವಾತಂತ್ರ್ಯವನ್ನು ಪಡೆದ ಸ್ತ್ರೀಯರು ವಚನಕಾರರ ಜೊತೆಗೆ ತಾತ್ವಿಕ ಚರ್ಚೆ ವಿಚಾರ ವಿನಿಮಯ ಇತ್ಯಾದಿ ವೈಚಾರಿಕ ಚಟುವಟಿಕೆಗಳಲ್ಲಿ ಭಾಗವಹಿದ್ದಲ್ಲದೆ ವಚನಗಳನ್ನು ರಚಿಸಿದರು. ಅಕ್ಕಮಹಾದೇವಿ ಮೊದಲಿಗೇ ನೆನಪಾದರೂ ಆಕೆಯ ಜೊತೆಯಲ್ಲಿ ವಚನಗಳನ್ನು ರಚಿಸಿರುವ ಹಲವಾರು ವಚನಕಾರ್ತಿಯರಿದ್ದಾರೆ.

ಈ ಸಮಯದಲ್ಲಿ ಅಕ್ಕಮಹಾದೇವಿ, ಮುಕ್ತಾಯಕ್ಕೆ, ಗಂಗಾಬಿಕೆ, ಅಕ್ಕನಾಗಮ್ಮ, ಮೋಳಿಗೆ ಮಹಾದೇವಮ್ಮ ಮುಂತಾದವರೆಲ್ಲದೆ ತೀರ ಕೆಳವರ್ಗದಿಂದ ಬಂದ ಕಾಳವ್ವ, ಸಂಕವ್ವ, ಗುಡ್ಡಮ್ಮ, ರೇಕಮ್ಮ ರಾಮಮ್ಮ ಮುಂತಾದ ಹಲವು ವಚನಕಾರ್ತಿಯರು ಸಾಹಿತ್ಯದಲ್ಲಿ ಸಂವೇದಿಸಿದ್ದು ಮಹತ್ವದ ಘಟನೆಯಾಗಿದೆ. ಇದರ ಸಂವೇದನೆಯ ನೆಲೆಗಳಲ್ಲಿ ಭಿನ್ನ ಭಿನ್ನ ಸ್ವರೂಪವನ್ನು ಮನಗಾಣಬಹುದು.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯು ನವೋದಯ ಸಾಹಿತ್ಯಕ್ಕೆ ತುಂಬ ಮಹತ್ವವಿದೆ. ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಎಲ್ಲ ದೃಷ್ಟಿಯಿಂದಲೂ ಒಂದು ಹೊಸ ತಿರವನ್ನು ಪಡೆದ ಕಾಲವಾಗಿತ್ತು. ಆಧುನಿಕ ಕನ್ನಡ ಸಾಹಿತ್ಯವು ವಿಭಿನ್ನ ಪ್ರೇರಣೆ, ಸಂಘರ್ಷ, ತಾಕಟಗಳನ್ನು ಹೊಂದುತ್ತಲೇ ಬೆಳೆದು ಬಂದಿದೆ. ನಮ್ಮ ಹಳೆಯ ಮಹಾಕಾವ್ಯಗಳ ಪರಂಪರೆಯನ್ನೇ ಮುಂದುವರೆಸಬೇಕೆ? ಆಧುನಿಕ ಯುಗಕ್ಕೆ ಅನುಗುಣವಾಗಿ ಬದಲಾಗುತ್ತಿರುವ ಮೌಲ್ಯಗಳನ್ನು ಅಳವಡಿಸಿಕೊಳ್ಳಬೇಕೆ? ಎಂಬ ಸಂಧಿಕಾಲದ ಮಹತ್ವಪೂರ್ಣ ಪ್ರಶ್ನೆಯು ಕವಿ ಮುದ್ದಣನಿಗೆ ಎದುರಾಯಿತು.

ಅಡಿಗ, ಕಂಬಾರ, ಶರ್ಮಾ, ತೇಜಸ್ವಿ, ಲಂಕೇಶ, ಚಿತ್ತಾಲ, ಕಾರ್ನಾಡ, ತಿರಮಲೇಶ, ಅನಂತಮೂರ್ತಿ ಮುಂತಾದವರು ನವೋದಯದ ಕೊನೆಯ ಹಂತದಿಂದ ನವ್ಯಕ್ಕೆ ಬಂದವರು. ಇವರ ಸಾಹಿತ್ಯದಲ್ಲಿ ಪ್ರಮುಖವಾಗಿ ಬರುವುದೆಂದರೆ ಶೋಧ-ಬದುಕಿನ ಹುಡುಕಾಟ, ಇದೇ ಕಾಲಕ್ಕೇನೇ ಮಹಿಳಾ ಲೇಖಕಿಯರೂ ಬರೆದಿದ್ದಾರೆ. ವೀಣಾ ಶಾಂತೇಶ್ವರ, ರಾಜಲಕ್ಷ್ಮಿ ಅವರ ಕಥೆಗಳು ನವ್ಯೆದ ಸಂದರ್ಭದ್ದಾಗಿ ಕಾಣದೇ ನವೋದಯ ಕಾಲದಲ್ಲಿ ಬರೆದಂತೆ ಇವೆ. ಇದೇ ಕಾಲದಲ್ಲಿ ಬಂದಂತಹ ಮಹಿಳಾ ವಚನಯುಗವು ಹಲವಾರು ದೃಷ್ಟಿಕೊನದಿಂದ ನೋಡಿದ್ದಾಳೆ. ಈ ಎಲ್ಲಾ ಕಾಲಕ್ಕಿಂತಲು ವಚನ ಯುಗವು ಹಲವಾರು ದೃಷ್ಟಿಕೋನದಿಂದ ಪ್ರಮುಖವಾಗಿದೆ.

### 3.1.1 ವಚನಯುಗದಲ್ಲಿ ಸ್ತ್ರೀ ಸಂವೇದನೆ:

ಕನ್ನಡ ಸಾಹಿತ್ಯಕ್ಕೆ ಸುಮಾರು ಐನೂರು ವರ್ಷಗಳ ಇತಿಹಾಸವಿದೆ. ಆದರೆ ಅಷ್ಟು ವರ್ಷಗಳ ಕಾಲವೂ ಸ್ತ್ರೀಪರವಾದ, ಸ್ತ್ರೀವಿಚಾರಗಳನ್ನು ಪ್ರತಿಧ್ವನಿಸುವ ಸಾಹಿತ್ಯ ರಚನೆಯಾದುದು ತುಂಬಾ ಕಡಿಮೆ ಮಟ್ಟದಲ್ಲಿ. ಹತ್ತನೇ ಶತಮಾನದಲ್ಲಿ ಅತ್ತಿಮಬ್ಬೆ ತಾನು ಬರಹಗಾರ್ತಿಯಾಗದಿದ್ದರೂ ತನ್ನ ಸಂಪತ್ತನ್ನು ಜೈನಧಾರ್ಮಿಕ ಕೃತಿಯಾದ ಶಾಂತಪುರಾಣವನ್ನು ಪ್ರಚಾರ ಮಾಡಲು ಬಳಸಿದ್ದು ಹಾಗೂ ರನ್ನನ ಸಾಹಿತ್ಯಕ್ಕೆ

ಚಟುವಟಿಕೆಗಳಿಗೆ ಪ್ರೋತ್ಸಾಹವನ್ನು ಪ್ರಚಾರ ಮಾಡಲು ಬಳಸಿದ್ದು ಹಾಗೂ ಕನ್ನಡ ಸಾಹಿತ್ಯಕ್ಕೆ ಚಟುವಟಿಕೆಗಳಿಗೆ ಪ್ರೋತ್ಸಾಹವನ್ನು ನೀಡಿದ್ದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸ್ಮರಿಸುವಂತಹ ಮಹತ್ವದ ಘಟ್ಟ.

ಹನ್ನೆರಡನೆಯ ಶತಮಾನದ ವಚನ ಸಾಹಿತ್ಯ ಸ್ತ್ರೀಪರವಾದ ಚಳುವಳಿಗೆ ವೈಚಾರಿತವಾದ ಭದ್ರ ಬುನಾದಿಯನ್ನು ಹಾಕಿತು ಎಂದು ಹೇಳಿದರೆ ಉತ್ಪ್ರೇಕ್ಷೆಯಾಗುವುದಿಲ್ಲ. ವಚನಯುಗದಲ್ಲಿಯೂ ನಕ್ಷತ್ರದ ರೀತಿಯಲ್ಲಿ ಮಿನುಗುವಂತಹವಳು ಅಕ್ಕಮಹಾದೇವಿ ಮಾತ್ರ. ಸಂಸಾರದ ಸಾಂಸ್ಥಿಕ ಬಂಧನದಿಂದ ಹೊರಬಂದು ಮಹಿಳೆ ತನ್ನ ಮಾರ್ಗವನ್ನು ತಾನೇ ಆಯ್ದುಕೊಳ್ಳಬಹುದು ಎಂಬ ಸಿದ್ಧಾಂತಕ್ಕೆ ಒಂದು ವಿಶಿಷ್ಟವಾದ ತಿರುವನ್ನು ನೀಡಿದ ಅಕ್ಕಮಹಾದೇವಿಯ ಬದುಕು-ಬರಹಗಳು ದೇವಿಯ ಮಾರ್ಗದಲ್ಲಿ ಮುನ್ನಡೆದ ಮುಕ್ತಾಯಕ್ಕೆ, ಕಾಳವೇ, ಗಂಗಾಂಬಿಕೆ ಮುಂತಾದ ಶರಣರ ಬರಹಗಳಲ್ಲಿ ಸ್ತ್ರೀವಾದಿ ತತ್ವಗಳ ಛಾಯೆಯನ್ನು ಗುರುತಿಸಬಹುದು. ಕನ್ನಡ ಸಾಹಿತ್ಯದಲ್ಲಿ ಸ್ತ್ರೀವಾದಿ ಸಾಂಸ್ಕೃತಿಕ ನೆಲಗಳನ್ನು ಹುಡುಕುವಾಗ ಶರಣರ ವಚನಗಳಿಗೆ ಆದ್ಯತೆ ನೀಡಬೇಕಾಗಿದೆ.

"ಮಹಿಳೆಯ ಸಂವೇದನೆ ಗ್ರಹಿಕೆಯ ಲಯ, ಗತಿ ಪುರಷ, ಸಂವೇದನೆಗಳಿಗಿಂತ ಭಿನ್ನವಾಗಿದೆ. ಕೆ.ವಿ.ನಾರಾಯಣ ಅವರು ಒಂದು ಸಂದರ್ಭದಲ್ಲಿ ಹೇಳಿದ ಮಾತುಗಳನ್ನ ಹೇಳುವುದಾದರೆ ಸ್ತ್ರೀ ಭಾಷೆ ಸದ್ದಿನಿಂದ ಮೌನದ ಕಡೆ ಚಲಿಸುತ್ತದೆ."[೧] ಅದು ಸಂಬಂಧ ಮೂಲವಾದುದು ಭಾವನೆಗಳನ್ನು ಪಡೆದುಕೊಳ್ಳುವ ಮತ್ತು ಶೇಖರಿಸಿಟ್ಟುಕೊಳ್ಳುವ ಭಾಷಿಕ ಕ್ರಿಯೆ ಅಲ್ಲಿರುತ್ತದೆ. ಸ್ತ್ರೀವಾದಿ ಚಿಂತನೆ ಸ್ತ್ರೀಸಂವೇದನೆಯ ಜೈವಿಕ ಪರಿಗ್ರಹಿಕೆಯನ್ನು ನಿರಾಕರಿಸುತ್ತದೆ. ಲಿಂಗಾಧರಿತ ವ್ಯವಸ್ಥೆಯಲ್ಲಿ ಹೆಣ್ಣುಗಂಡಿಗೆ ವಿಭಿನ್ನ ಅನುಭವಗಳಿವೆ ಎಂಬುದು ತಾತ್ವಿಕ ಸತ್ಯ. ಈ ವಿಭಿನ್ನ ಅನುಭವಗಳನ್ನು ಅಭಿವ್ಯಕ್ತಿಸಲು ವಿಭಿನ್ನ ಭಾಷಾ ರೂಪ ಅಗತ್ಯವಿದೆ. ಹೆಣ್ಣಿನ ಅಸ್ತಿತ್ವದ ಬಗ್ಗೆ ನೇತ್ಯಾತ್ಮಕವಾದ ಪುರುಷ ಲಯ ಭಾಷೆಯಲ್ಲಿ ಹೆಣ್ಣು ತನ್ನ ಅನುಭವವನ್ನು ಅಭಿವ್ಯಕ್ತಿಸುವುದು ಹೇಗೆ? ಭಾಷೆಯ ಮೂಲಕ ಹೊರ ಹೊಮ್ಮುತ್ತಲೇ ಅಸ್ತಿತ್ವ ಪಡೆದುಕೊಳ್ಳುತ್ತದೆ.

ವಚನ ಸಾಹಿತ್ಯದ ಉಗಮಕ್ಕಿಂತ ಹಿಂದೆ ಸ್ತ್ರೀಯರ ಪರಿಸ್ಥಿತಿ ತುಂಬ ಶೋಚನಿಯವಾಗಿತ್ತು. ನಾಲ್ಕು ಗೋಡೆಗಳನ್ನ ಬಿಟ್ಟು ಹೊರ ಜಗತ್ತನ್ನು ಕಂಡವರಲ್ಲ. ಅವರಿಗೆ ವ್ಯಕ್ತಿ ಸ್ವಾತಂತ್ರ್ಯವಿರಲಿಲ್ಲ. ಅಂತಹ ಉಸಿರುಗಟ್ಟುವ ವಾತಾವರಣದ ಸಂದರ್ಭದಲ್ಲಿ ಹುಟ್ಟಿಕೊಂಡ ವಚನಕಾರರು ಸ್ತ್ರೀಸಮಾಜವನ್ನು ಸಾಮಾಜಿಕ ನ್ಯಾಯದ ಮೇಲೆ ಕಟ್ಟಲು ಹೆಣಗಿದಲು. ಸ್ತ್ರೀಯರು ಪುರುಷರಷ್ಟೇ ಸಮಾನರು ಎಂಬ ಲಿಂಗ ಸಮಾನತೆಯ ತತ್ವವನ್ನು ಅವರು ಪ್ರತಿಪಾದಿಸಿದರು.

ಜೇಡರ ದಾಸಿಮಯ್ಯನ ಪ್ರಕಾರ ಗಂಡು-ಹೆಣ್ಣಿನ ವ್ಯತ್ಯಾಸ ಕೇವಲ ದೈಹಿಕ ವ್ಯತ್ತಾಸಗಳ ಮೇಲೆ ಸ್ಥಾಪಿತವಾಗಿದೆ. ಅವರೊಳಗಿನ ಆತ್ಮಕ್ಕೆ ಭೇದವಿಲ್ಲ ಎಂದು ಹೇಳಿ ಲಿಂಗಭೇದವನ್ನು ಅಳಿಸಿ ಹಾಕಿದರು.



೧. ಮಹಿಳಾ ಅಧ್ಯಯನ ಸಂ-ಡಾ.ಶಿವಾನಂದ ಎಸ್ ವಿರಕ್ತಮಠ-ಪುಟ-೮೭ (೨೦೦೪)

ಗೊಗ್ಗವ್ವೆ, ಸತ್ಯಕ್ಕರು ತಮ್ಮ ವಚನಗಳಲ್ಲಿ ಆತ್ಮಕ್ಕೆ ಲಿಂಗಭೇದವಿಲ್ಲವೆಂದು ಒತ್ತಿ ಹೇಳಿ ಲಿಂಗಸಮಾನತೆಯನ್ನು ಪ್ರತಿಪಾದಿಸಿದರು. ಹೆಣ್ಣು, ಹೊನ್ನು, ಮಣ್ಣು ಈ ಮೂರನ್ನು ಮಾಯೆ ಎಂಬ ಪರಿಕಲ್ಪನೆಯ ಬಗೆಗಿದ್ದ ತಪ್ಪ ನಂಬಿಕೆಯನ್ನು ಹೊಡೆದು ಹಾಕಿ ಹೆಣ್ಣನ್ನು ಮಾಯಾ ಸೆರೆಯಿಂದ ಮುಕ್ತಗೊಳಿಸಿದರು.

'ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ
ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ
ಮಣ್ಣು ಯಾಯೆಯಂಬರು ಮಣ್ಣು ಮಾಯೆಯಲ್ಲ
ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರ'[೧]

ಎಂಬ ಅಲ್ಲಮ ನ ಪ್ರಕಾರ ಕೇವಲ ಹೆಣ್ಣು-ಹೊನ್ನು-ಮಣ್ಣುಗಳು ಮಾತ್ರ ಮಾಯೆಯಲ್ಲಿ ಮನದ ಮುಂದಣ ಆಸೆಯೇ ಮಾಯೆ ಎಂದು ಸಾರಿ ಸಮಾಜದಲ್ಲಿ ಹೆಣ್ಣಿನ ಬಗೆಗಿದ್ದ ತಪ್ಪು ಕಲ್ಪನೆ ತೊಡೆದು ಹಾಕಿ ಅವಳು ಪುರುಷನಂತೆ ಒಂದು ಜೀವ ಎಂಬ ಹಿತಕರ ವಾತವರಣವನ್ನು ಸಮಾಜದಲ್ಲಿ ಶರಣರು ಮೂಡಿಸಿದರು. ಹೆಣ್ಣಿಗೆ ಕೊಟ್ಟ ಈ ಸಮಾನತೆ ವಚನಕಾರರ ಅಭೂತಪೂರ್ವ ಸಾಧನೆಯಾಗಿದೆ. ಆದರೆ ಸ್ತ್ರೀ ಕುರಿತು ಬಸವಣ್ಣನವರ ನಿಲುವುಗಳನ್ನು ಪರಿಶೀಲಿಸಿದ್ದಾರೆ.

'ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ
ಮೋಹಕ್ಕೆ ಮಗಳಾಗಿ ಹೆತ್ತಳು ಮಾಯೆ
ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ'[೨]

ಬಸವಣ್ಣನವರ ಮನೋಧೋರಣೆ ಸ್ಪಷ್ಟವಾಗುತ್ತದೆ. ಈ ವಚನದಿಂದ ಹೆಣ್ಣು ಮಾಯೆಯಾಗಿಯೇ ಕಂಡಳು .ಬಸವಣ್ಣನಿಗೆ

'ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ!
ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತಿ .
ಇದ್ದರೇನೋ ಶಿವ ಶಿವಾ'[೩]

ಗಂಡನ ಮೇಲೆ ಸ್ನೇಹ ಇಲ್ಲದಿದ್ದರೆ ಅದು ನಿಜವಾದ ದಾಂಪತ್ಯವಲ್ಲ. ಸರಿ, ಆದರೆ ಹೆಣ್ಣಿನ ಮೇಲೆ ಗಂಡನಿಗಿರಬೇಕಾದ ಸ್ನೇಹದ ಬಗ್ಗೆ ಬಸವಣ್ಣನವರು ಯೋಚಿಸುವುದಿಲ್ಲ. ಹೆಣ್ಣನ್ನು ಕುರಿತು ಬಸವಣ್ಣನವರ ನಿಲುವು ಸಾಂಪ್ರದಾಯಿಕವಾಗಿತ್ತು. ವ್ಯವಸ್ಥೆಗೆ ಪೂರಕವಾಗಿತ್ತು. ಅದಕ್ಕೆ ಮುಖ್ಯ ಕಾರಣ ಸಾಮಾಜಿಕ ಒತ್ತಡವನ್ನು ಮೀರುವುದು ಅವರಿಗೂ ಸಾಧ್ಯವಾಗಲಿಲ್ಲ.

---

೧. ಮಹಿಳಾ ಅಧ್ಯಯನ ಸಂ-ಡಾ.ಶಿವಾನಂದ ಎಸ್ ವಿರಕ್ತಮಠ-ಪುಟ-೮೮ (೨೦೦೮)
೨. ಮಹಿಳಾ ಅಧ್ಯಯನ ಸಂ-ಡಾ.ಶಿವಾನಂದ ಎಸ್ ವಿರಕ್ತಮಠ-ಪುಟ-೮೮ (೨೦೦೮)
೩. ಮಹಿಳಾ ಅಧ್ಯಯನ ಸಂ-ಡಾ.ಶಿವಾನಂದ ಎಸ್ ವಿರಕ್ತಮಠ-ಪುಟ-೮೮ (೨೦೦೮)

ವಚನ ಸಂಸ್ಕೃತಿಯಲ್ಲಿ ಶರಣರು ದಾಂಪತ್ಯ ಜೀವನ ನಡೆಸುತ್ತಲೇ ತುಂಬ ಕಾಯಕ ನಿಷ್ಠರಾಗಿದ್ದರು. ಅಂತಹ ಶರಣ ದಂಪತಿಗಳು ನಮಗೆ ದೊರೆಯುತ್ತಾರೆ. ಆಯ್ದಕ್ಕಿ ಮಾರಯ್ಯ, ಆಯ್ದಕ್ಕಿ ಲಕ್ಕಮ್ಮ, ಮೊಳಿಗೆ ಮಾರಯ್ಯ- ಮೊಳಿಗೆ ಮಹಾದೇವಮ್ಮ, ಕಾಳವ್ವೆ ಮುಂತಾದವರು. ಅವರ ವಿಶೇಷವೆಂದರೆ ವಚನ ಸಂಸ್ಕೃತಿಯಲ್ಲಿ ಶರಣ ದಂಪತಿಗಳು ಮಕ್ಕಳಿಗಾಗಿ ಹಂಬಲಿಸುವ ಉದಾಹರಣೆಗಳು ದೊರೆಯುವುದಿಲ್ಲ. ಕಾಯಕ ದಾಸೋಹ, ಅವರಿಗೆ ಮುಖ್ಯವಾಗುತ್ತದೆ. ಆಯ್ದಕ್ಕಿ ಮಾರಯ್ಯ, ಅಗತ್ಯಕ್ಕಿಂತ ಹೆಚ್ಚು ಅಕ್ಕಿ ತಂದಾಗ ಅವನ ಹೆಂಡತಿ ಲಕ್ಕಮ್ಮ ಪ್ರಶ್ನಿಸುತ್ತಾಳೆ. 'ಒಯ್ಯನ ಮೀರಿ ಇಮ್ಮನದಲ್ಲಿ ತಂದಿರ ......ಅಲ್ಲಿಯೇ ಸುರಿದು ಬನ್ನಿ'[೧] ಎಂದು ಗಂಡನಿಗೆ ಆಜ್ಞೆ ಮಾಡುತ್ತಾಳೆ.

ಈ ಅಂಶವನ್ನು ಗಮನಿಸಿದಾಗ ಇಲ್ಲಿ ಈ ಒಳ ಸಂವೇದನೆ ಉಂಟಾಗಿರುವುದನ್ನ ತಿಳಿಯಬಹುದು. ವಚನ ಸಂಸ್ಕೃತಿಯಲ್ಲಿ ಗಂಡನಿ ಗೆ ತಿಳಿಹೇಳುವ ಅಧಿಕಾರ ಹೆಣ್ಣಿಗಿದೆ. ವಚನಕಾರರ ಕಾಲಕ್ಕೆ ಅಂತಹ ಬಂದು ವೈಚಾರಿಕ ಸಂಪ್ರದಾಯ ನಿರ್ಮಾಣವಾಯಿತು. ಅಕ್ಕಮಹಾದೇವಿ ಸಿದ್ದಮಾದರಿಯ ಸಮಾಜ ರಚನೆಯನ್ನು ಪ್ರಶ್ನಿಸಿದ ಚಿಂತನೆಗಳು ಅವಳ ವಚನಗಳಲ್ಲಿವೆ.

'ಅತ್ತೆ ಮಾಯೆ ಮಾವ ಸಂಸಾರಿ
ಮೂವರು ಮೈದುನರು ಹುಲಿಯಂಥಾ ಅದದಿರು
ನಾಲುವರು ನಗೆವೆಣ್ಣು ಕೇಳು ಕೆಳದಿ!
ಐವರು ಭಾವದಿರನೊಯ್ವ ದೈವವಿಲ್ಲ !
ಆರು ಪ್ರಚೆಯತ್ತಿಗೆಯರು ಮೀರನಾರೆನು ಕಾಯೆ!'[೨]

ಸಾಂಪ್ರದಾಯಿಕ ಸಂಸಾರ ವ್ಯವಸ್ಥೆಯನ್ನು, ಅಲ್ಲ ಬರುವ ಎಲ್ಲ ಕೌಟಂಬಿಕ ಸಂಬಂಧಗಳನ್ನು ಅಕ್ಕ ಸಾರಾಸಗಟವಾಗಿ ತಿರಿಸ್ಕರಿಸಿದ್ದಾಳೆ. ತನ್ನೊಳಗಿನ ಒಳತೋಟಿಯ ಅನುಭವವನ್ನು ಸೊಗಸಾಗಿ ವಿವರಿಸಿದ್ದಾಳೆ. ಕರ್ಮಠ ವಾತಾವರಣದ ಸಂಸಾರವನ್ನು ಧಿಕ್ಕರಿಸಿ ಬಿಡುಗಡೆ ಹಾದಿಯನ್ನ ಹೊಂದಿ ಸ್ವಾತಂತ್ರ್ಯ ಬಯಸಿದ್ದಾಳೆ. ಸಮಾಜಿಕ ವ್ಯವಸ್ಥೆ ವಿಧಿಸಿದ ಎಲ್ಲ ನಿಯಗಳನ್ನು ಧಿಕ್ಕರಿಸಿ ತನ್ನಿಚ್ಚೆಯನ್ನು ಮೆರೆದ ವ್ಯಕ್ತಿ ಸ್ವಾತಂತ್ರ್ಯ ಅಕ್ಕನ ಬಾಳಿನ ವಿಶೇಷವಾಗಿದೆ. ಹೆಣ್ಣು ಹೆಗ್ಗಾದರೆ ಗಂಡಿನ ಸೂತಕ ಈ ಅಲೋಚನೆ ಕ್ರಾಂತಿಕಾರಿಯಾಗಿದೆ. ಹೆಣ್ಣು ಸೂತಕವೆಂದು ಪರಿಗಣಿಸಿದರೆ ಈ ಜಗತ್ತು ಸೂತಕ ಎಂದು ಹೇಳಿ ಅವಳನ್ನು ಸೂತಕದ ಪಾತಕದಿಂದ ಬಿಡುಗಡೆ ಮಾಡಿದಳು. ಹೆಣ್ಣನ್ನು ಮಾಯೆ ಮತ್ತು ಸೂತಕದ ಸಂಕೋಲೆಯಿಂದ ಬಿಡಿಸಿದ ಶರಣರು ಅವಳಲ್ಲಿ ದೇವತ್ತವನ್ನು ಕಂಡರು.

'ಕನಿಷ್ಠದಲ್ಲಿ ಹುಟ್ಟಿದೆ, ಉತ್ತಮದಲ್ಲಿ ಬೆಳೆದೆ
ಸತ್ಯ ಶರಣರ ಪಾದವಿಡಿದೆ
ಆ ಶರಣರ ಪಾದವಿಡಿದು ಗುರುವಿನ ಕಂಡೆ, ಲಿಂಗವ ಕಂಡೆ
ಜಂಗಮದ ಕಂಡೆ, ಪಾದೋದಕವ ಕಂಡೆ ಪ್ರಸಾದವ ಕಂಡೆ'[೩]

೧. ಮಹಿಳಾ ಅಧ್ಯಯನ ಸಂ-ಡಾ.ಶಿವಾನಂದ ಎಸ್ ವಿರಕ್ತಮಠ-ಪುಟ-೮೮ (೨೦೦೮)
೨. ಮಹಿಳಾ ಅಧ್ಯಯನ ಸಂ-ಡಾ.ಶಿವಾನಂದ ಎಸ್ ವಿರಕ್ತಮಠ-ಪುಟ-೯೦ (೨೦೦೮)
೩. ಮಹಿಳಾ ಅಧ್ಯಯನ ಸಂ-ಡಾ.ಶಿವಾನಂದ ಎಸ್ ವಿರಕ್ತಮಠ-ಪುಟ-೯೦ (೨೦೦೮)

ನೀತಿಯ ನೆಲೆಗಟ್ಟಿನ ಮೇಲೆ ಸಮತಾವಾದ ಸಮಾಜರಚನೆ ಶರಣರ ಗುರಿಯಾಗಿತ್ತು. ಹೆಣ್ಣನ್ನು ಕೇವಲ ಭೋಗದ ವಸ್ತು ಎಂಬು ಭಾವಿಸಿದ್ದ ಪುರುಷ ಅವಳ ಮೇಲೆ ಕಾಕ ದೃಷ್ಟಿ ಬೀರಿದಾಗ ಅದನ್ನು ಶರಣರು ಖಂಡಿಸಿದರು.

'ಛಲಬೇಕು ಶರಣಂಗೆ ಪರಸತಿಯ ನೊಲ್ಲೆಂಬ ಬಸವಣ್ಣ
ಪರಸ್ತ್ರೀಯರ ಕೂಡದಿಪ್ಪುದೇ ಶೀಲ-ಶಿವಲೆಂಕ ಮಂಚಣ್ಣ.'[೧]

ಶರಣರು ನೆಮ್ಮದಿ ಜೀವನಕ್ಕೆ ಪ್ರಾಶಸ್ತ್ಯಕೊಟ್ಟರು. ಸತಿಪತಿಗಳ ಅಂತರಂಗ ಬಹಿರಂಗ ಏಕವಾಗಿ ಅವರ ಆಚಾರ-ವಿಚಾರಗಳಲ್ಲಿ ಏಕತ್ಮಕತೆ ತೋರಬೇಕೆಂದರು. ಜೇಡರದಾಸಿಮಯ್ಯ ಹೇಳುವಂತೆ 'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವರಿಗೆ' ಇದರಿಂದ ದಂಪತಿಗಳ ಏಕಭಕ್ತಿಯ ಪರಿಣಾಮವನ್ನು ತಿಳಿಯಬಹುದು. ಇದರಿಂದಾಗಿ ಹೆಣ್ಣು ಗಂಡು, ಮೇಲು-ಕೀಳೆಂಬ ಬೇಧ ಉಳಿಯುವುದಿಲ್ಲ. ಆಚಾರ-ವಿಚಾರ ಸ್ವಾತಂತ್ರ್ಯದಿಂದ ಅವರು ಬದುಕು ಸಾಗಿಸುತ್ತಾರೆ.

ಭಾರತೀಯ ಮಹಿಳೆಯರಲ್ಲೇ ಅಕ್ಕ ತನ್ನ ಚೇತನದಿಂದ ಶ್ರೀಶೈಲದ ಗಿರಿಯೆತ್ತರಕ್ಕೆ ನಿಲ್ಲವಳು, ಅದೇ ಕಾಲದಲ್ಲಿ ಬಂದು ಇನ್ನಿತರ ವಚನಗಾರ್ತಿಯರು ಕುಟಂಬದ ನೆಲೆಯಲ್ಲಿಯೇ ಆಲೋಚಿಸಿದಂತವರು. ಕಾಯಕದ ಹಿನ್ನಲೆಯಲ್ಲಿ ಭಕ್ತಿ ಭಾವವನ್ನ ವ್ಯಕ್ತಗೊಳಿಸುವವರು. ಸಂಸಾರದ ಹೊರಗೆ ಬಂದ ನಿಂತು ಮಾತನಾಡಿದವರು ಅಕ್ಕನ ರೀತಿಯಲ್ಲಿ ಯಾರು ಇಲ್ಲ, ಹಾಗಾಗಿ ವಿಶೇಷವಾಗಿ ಕನ್ನಡ ಸಾಹಿತ್ಯದಲ್ಲಿ ಅಕ್ಕಮಹಾದೇವಿ ಕಂಡು ಬರುತ್ತಾಳೆ. ಕೌಶಿಕನಿಗೆ ಒಗೆದ ಸೀರೆ ಇಡೀ ಸಮಾಜಕ್ಕೆ ಒಗೆದುದಾಗಿದೆ. ಆಕೆಯ ದಿಟ್ಟ ನೀಲುವ ಬಿಚ್ಚು ಮನಸ್ಸು ಬೆರಗು ಹುಟ್ಟಿಸುತ್ತದೆ.

'ಒಮ್ಮೆ ಕಾಮನ ಕಾಲ ಹಿಡಿವೆ
ಒಮ್ಮೆ ಚಂದ್ರಮರಿಗೆ ಸೆರಗೊಡ್ಡಿ ಬೇಡುವೆ.'[೨]

ಕಣ್ಣಿಗೆ ಕಾಣದ ಕಾಮನನ್ನೂ ವಿನಂತಿಸುವಷ್ಟು ಪರಮಾತ್ಮನ ವಿರಹವಿದೆ. ಕಾಮ ಚಂದ್ರಮರ ನೆರವು ಪಡೆಯಲು ಪ್ರಯತ್ನವೂ ಇದೆ. ನನ್ನ ಪ್ರೀತಿ ಪ್ರೇವವನ್ನು ಚೆನ್ನಮಲ್ಲಿಕಾರ್ಜುನನಿಗೆ ತಿಳಿಸಿರಿ, ಅವನಿಗೂ ನನ್ನಲ್ಲಿ ವಿರಹ, ಪ್ರೀತಿ ಉಂಟಾಗುವಂತೆ ಮಾಡಿರಿ ಎಂದು ಕಾಮನ ಚಂದ್ರರಲ್ಲಿ ಬೇಡುತ್ತಿರುವ ಅಕ್ಕನ ಸಂವೇದನೆ ಏನು ಎಂದು ತಿಳಿಯುತ್ತದೆ.

'ನಾಳೆ ಬರುವುದು ನಮಗಿಂದೇ ಬರಲಿ
ಇಂದು ಬರುವುದು ನಮಗೀಗಲೇ ಬರಲಿ
ಆಗೀಗ ಎನ್ನದಿರು ಚೆನ್ನಮಲ್ಲಿಕಾರ್ಜುನಾ'[೩]

---

೧. ಮಹಿಳಾ ಅಧ್ಯಯನ ಸಂ-ಡಾ.ಶಿವಾನಂದ ಎಸ್ ವಿರಕ್ತಮಠ-ಪುಟ-೯೧ (೨೦೦೪)
೨. ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ-ಎಚ್.ಎಸ್.ಮುಕ್ತಾಯಕ್ಕ-ಪುಟ-೪೨ (೧೯೯೭)
೩. ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ-ಎಚ್.ಎಸ್.ಮುಕ್ತಾಯಕ್ಕ-ಪುಟ-೪೪ (೧೯೯೭)

ಅಕ್ಕ ಎದುರಿಸಿದ ಕಷ್ಟಗಳಿಗೆ ಕೊನೆಯೇ ಇಲ್ಲ. ಬದುಕಿನ ಮೇಲಣ ಪ್ರೀತಿ, ಛಲ, ಹೋರಾಟ ಆಕೆಯ ವಚನಗಳಲ್ಲಿ ಎದ್ದು ಕಾಣುವುದು. ಹೆಗ್ಗಂದರೆ ಚೊಲ್ಲು ಸುರಿಸುವಲ್ಲಿ ಕಾಮುಕರಿಗೆ ಆರೆಂದು ಬಂದಿರಣ್ಣಾ ಎಂದು ಕೇಳುವಲ್ಲಿ ಆಕೆ ಎದುರಿಸಿರಬಹುದಾದ ಕಷ್ಟಗಳಿಗೆ ಕೊನೆಯೇ ಇಲ್ಲವೆಂದು ಕಾಣುವುದು 'ನಾನು ಹೆಂಗಸಲ್ಲ' ಎಂದು ಹೇಳುವಲ್ಲಿ ಆಕೆ ಹೆಣ್ತನವನ್ನು ನಿರಾಕರಿಸುತ್ತಿರುವಳೆಂದು ಅರ್ಥವಲ್ಲ. ಹೆಣ್ಣು ಗಂಡೆಂಬ ಬೇಧದಿಂದ ಮೇಲೆ ನಿಂತಾಕೆ ಅಕ್ಕ. ಹೆಣ್ಣನ್ನು ಭೋಗದ ವಸ್ತುವನ್ನಾಗಿ ಕಾಣುವುದನ್ನು ತಿರಸ್ಕರಿವಳು. ಹೆಣ್ಣು ಗಂಡಿನ ರಕ್ಷಣೆಯಲ್ಲಿಯೇ ಇರಬೇಕೆಂಬುದನ್ನು ಅಕ್ಕ ನಿರಾಕರಿಸಿ, ಸ್ವತಂತ್ರವಾಗಿ ಬದುಕಬಹುದೆಂಬುದನ್ನು ನಡೆದು ತೋರಿಸಿದ್ದಾಳೆ. ವಚನಗಳಲ್ಲಿ ಸ್ತ್ರೀ ಸಂವೇದನೆ ಹೃದಯ ಸ್ಪರ್ಶಿಯಾಗಿ ಮೂಡಿಬಂದಿದೆ. ಇಂತಹ ಸಂದರ್ಭದಲ್ಲಿ ಭಾಷೆ ಒಂದು ಸಂಸ್ಕೃತಿಯ ಬದುಕಿನ ವಾಹಕವಾಗಿರುವಂತೆ ಆ ಬದುಕಿನ ಸಾತತ್ಯತೆಯನ್ನು ಉಳಿಸಿಕೊಂಡು ಬರುತ್ತದೆ.

### 3.2 ಮುಸ್ಲಿಂ ಸಂವೇದನೆ:

ಕನ್ನಡ ಸಾಹಿತ್ಯದಲ್ಲಿ ಮುಸ್ಲಿಂ ಸಂವೇದನೆಗಳು ಚಿತ್ರವಾದುದು ತೀರ ಇತ್ತೀಚೆಗೆ, ಮುಸ್ಲಿಂ ಜನಾಂಗದ ಸಂಪ್ರಾದಯ, ನಂಬಿಕೆ, ಆಚರಣೆ, ಧರ್ಮ, ಶ್ರದ್ದೆಗಳು ಕನ್ನಡ ಸಾಹಿತ್ಯದಲ್ಲಿ ಇತ್ತೀಚೆಗಷ್ಟೇ ದಾಖಲಾದವು. ಆ ಜನಾಂಗದ ಸಂವೇದನೆಗಳು, ತಲ್ಲಣಗಳು ಒಳತೋಟಗಳು ಚಿತ್ರಿತವಾದವು. ಆ ಸಮಾಜದ ಕಾಲಕಾಲದ ಸ್ಥತ್ಯಂತರಗಳು- ಸಾಂಸ್ಕೃತಿಕ ಲೋಕಗಳು ಕನ್ನಡ ಸಾಹಿತ್ಯದಲ್ಲಿ ಅನಾವರಣಗೊಂಡವು.

ಮುಸ್ಲಿಂ ಸಂವೇನೆಗಳನ್ನು ಬಂಡಾಯ ಪೂರ್ವದಲ್ಲಿಯೂ ಮುಸ್ಲಿಂ ಮೂಲದಿಂದ ಬಂದ ಕೆಲವು ಬರಹಗಾರು ರಚಿಸಿದರಾದರೂ, ಅವು ಮುಸ್ಲಿಂ ಸಮಾಜದ ದಟ್ಟ ಅನುಭವಗಳಾವೆಲ್ಲ ಸೋತವು. ಅದುವರೆಗೆ ಕನ್ನಡ ಸಾಹಿತ್ಯ ಲೋಕಕ್ಕೆ ಅಪರಿಚಿತವಾದ ಜನಾಂಗದ ನಿಗೂಢ ಲೋಕವೊಂದು ಕನ್ನಡ ಸಾಹಿತ್ಯದಲ್ಲಿ ತೆರೆದುಕೊಂಡಿತು.

### 3.3 ದಲಿತ ಸಂವೇದನೆ:

ದಲಿತ ಬಂಡಾಯದ ಸಂದರ್ಭದಲ್ಲಿ ಹೆಣ್ಣನ್ನು ಪುರಷ ಲೇಖಕರನ್ನು ಪ್ರದರ್ಶನದ ವಸ್ತುವಾಗಿ ಲೈಂಗಿಕ ಪ್ರತಿಮೆಯಾಗಿ, ಭಾವ ಶೂನ್ಯವಾದ ಗೊಂಬೆಯನ್ನಾಗಿ ನೋಡಲಿಲ್ಲ. ಹೆಣ್ಣನ್ನು ಮಾನವೀಯ ನೆಲೆಯಲ್ಲೇ ನೋಡಿದರು. ಅವರ ನೋವುಗಳನ್ನು ಗುರುತಿಸಿ ಅದರ ವಿರುದ್ದ ತಾವು ಧ್ವನಿ ಎತ್ತಿದರು. ಹೆಣ್ಣನ್ನು ಜೀವನದಿಯೆಂದು ಕರೆದದ್ದು ಚೌಚಿತ್ಯ ಪೂರ್ಣವೇ ಆಗಿದೆ. ಕಾವ್ಯ ಕಾದಂಬರಿ ಕಥೆ-ನಾಟಕ ಎಲ್ಲದರಲ್ಲೂ ಅವರ ನೋವಿನ ಮೌಲ್ಯವನ್ನು ಶೋಧಿಸಿ, ಪರಿಹಾರ ಹೊಸದಾರಿಯನ್ನು ಕಾಣುವ ನೋಟವಿದೆ.

ಈ ರೀತಿಯಾಗಿ ಸಂವೇದನೆಯ ಸ್ವರೂಪದ ನೆಲೆಗಳನ್ನು ಗುರುತಿಸಬಹುದಾಗಿದೆ. ಸಂವೇದನೆಯ ರೂಪಗಳು ಕಾಲಘಟ್ಟ ನೆಲೆಯಲ್ಲಿ ವ್ಯಕ್ತಗೊಂಡಿದೆ. ಜನಪದ ಸಾಹಿತ್ಯದಲ್ಲಿ ಸಂವೇದನೆಯನ್ನು ಗುರುತಿಸುವುದು ಸ್ಪಷ್ಟಮಟ್ಟಿಗೆ ಗೊಂದಲವನ್ನುಂಟುಮಾಡುತ್ತದೆ. ಏಕೆಂದರೆ ಇಲ್ಲಿ ಸ್ತ್ರೀ-ನಿರ್ಮಿತ, ಇದು ಪುರುಷ ನಿರ್ಮಿತ ಎಂದು ಜನಪದ ಸಾಹಿತ್ಯ ಸಂದರ್ಭದಲ್ಲಿ ಖಡಾಖಂಡಿತವಾಗಿ ಹೇಳಿದಿರೆವು. ಇನ್ನೂ ಪ್ರಾಚೀನಕಾಲದ ಸಾಹಿತ್ಯದಲ್ಲಿ ಸಂವೇದನೆ, ಮಧ್ಯಕಾಲದ ಸಂವೇದನೆ, ಮುಸ್ಲಿಂ ಸಂವೇದನೆ ಹೀಗೆ ವಿವಿಧ ರೀತಿಯಲ್ಲಿ ಗುರುತಿಸಿರುವ ಸಂವೇದನೆ ಹಿನ್ನಲೆಯಲ್ಲಿ ವಚನ ಸಾಹಿತ್ಯದಲ್ಲಿ ಕಂಡು ಬರುವಂತಹ ಸಂವೇದನೆ ಕನ್ನಡ ಸಾಹಿತ್ಯದಲ್ಲಿ ಕ್ರಾಂತಿಯನ್ನುಂಟು ಮಾಡಿದೆ ಎಂದು ಕಂಡುಬರುತ್ತದೆ.

## ಅಧ್ಯಾಯ 4

# ಅಕ್ಕಮಹಾದೇವಿ ವಚನಗಳಲ್ಲಿ ಸಂವೇದನೆಯ ಸ್ವರೂಪ

ಅಕ್ಕನ ವಚನಗಳಲ್ಲಿ ಹಲವು ರೀತಿಯ ಸಂವೇದನೆಗಳನ್ನು ಹಾಗೂ ವಚನಗಳ ಒಳ ಧ್ವನಿಗಳನ್ನು ಗುರುತಿಸಬಹುದು. ಧಾರ್ಮಿಕ ಸಂವೇದನೆ ನೆಲೆಯಲ್ಲಿ ಭಕ್ತಿ ಧರ್ಮವನ್ನು, ಸಾಮಾಜಿಕ ಸಂವೇದನೆಯಲ್ಲಿ ಸಮಾಜ, ಹೋರಾಟದ ಸಂವೇದನೆಯನ್ನ ಹಾಗೂ ಸಾಹಿತ್ಯದಲ್ಲಿ ಸಂವೇದನೆಯನ್ನ ನೋಡುತ್ತ ಕಾವ್ಯಾತ್ಮಕ ಪ್ರಕೃತಿ, ಸ್ತ್ರೀ ಸಂವೇದನೆ ಇಲ್ಲಿ ಪ್ರೇಮ, ಕಾಮ, ವೈರಾಗ್ಯ, ಈ ಹಿನ್ನಲೆಯಲ್ಲಿ ಅಕ್ಕನ ವಚನಗಳಲ್ಲಿ ಸಂವೇದನೆಯ ಸ್ವರೂಪವನ್ನೆ ಕಾಣಬಹುದಾಗಿದೆ.

ಸಾಹಿತ್ಯ ನಿರ್ಮಾಣವಾಗಿಲಿ, ತತ್ತ್ವೋಪದೇಶವಾಗಲಿ ಅಕ್ಕನ ವಚನಗಳ ಉದ್ದೇಶವಾಗಿಲ್ಲ. ಆಧ್ಯಾತ್ಮ ಸಾಧನೆಯಾದ ಆಕೆಯ ಸ್ವಾನುಭವದ ಅಭಿವ್ಯಕ್ತಿಯೇ ಜೀವಾಳವಾಗಿರುವ ಆಕೆಯ ವಚನಗಳಲ್ಲಿ ಆತ್ಮನಿವೇದನೆ, ಪ್ರೇಮಯೋಗ, ಲಿಂಗ-ಭಕ್ತಿನಿಷ್ಠೆ, ನಿರ್ಭರವಾಗಿ ಹರಿದಿದೆ. ಅಂತೆಯೇ ವಚನಗಳಿಗೆ ಕಾವ್ಯದ ಲೇಪ ಬಂದಿದೆ. ಹೆಣ್ಣು ಗಂಡೆಂಬ ಭೇದದಿಂದ ಮೇಲೆ ನಿಂತಾಕೆ ಅಕ್ಕ. ತನ್ನನ್ನು ನೋಡದೆ ಬೌದ್ಧಿಕ ವೈಚಾರಿಕ ನೆಲೆಯಲ್ಲಿ ಪಕ್ಷಪಾತ ಮಾಡದೆ ವ್ಯಕ್ತಿತ್ವವನ್ನು ನೋಡಬೇಕೆಂಬುದೇ ಈಕೆಯ ಕಳಕಳಿಯಾಗಿದೆ. ಆಧುನಿಕ ಸ್ತ್ರೀಪರ ಹೋರಾಟಗಳಿಗೂ ಈಕೆ ಭದ್ರವಾದ ನೆಲೆಗಟ್ಟನ್ನು ಹಾಕಿದ್ದಾಳೆ. ವಚನಯುಗವೇ ಹಲವಾರು ದೃಷ್ಠಿಕೋನದಿಂದ ಪ್ರಮುಖವಾಗಿದೆ. ಆಂತ ಕಾಲಘಟ್ಟದಲ್ಲಿ ಬಂದಂತಹ ಅಕ್ಕನ ವಚನಗಳಲ್ಲಿನ ಮೌಲ್ಯ ಅಂದಿನಿಂದ ಇಲ್ಲಿಯವರೆವಿಗೂ ಸರ್ವಕಾಲಿಕ ಮೌಲ್ಯಗಳಾಗಿ ಉಳಿದುಕೊಂಡು ಬಂದಿರುವುದನ್ನು ಕಾಣಬಹುದಾಗಿದೆ. ಅಕ್ಕ ಏಕಮುಖಿಯಾದ ಹೋರಾಟವನ್ನು ಮಾಡಿದವಳು. ಯಾವುದೇ ರೀತಿಯ ಸಹಾಯವನ್ನು ಚೆನ್ನಮಲ್ಲಿಕಾರ್ಜುನಲ್ಲಿ ಬಯಸಲಿಲ್ಲ ಅಕ್ಕ. ಅಂದರೆ ತಾನು ಅರಮನೆ, ಸಂಸಾರ, ರಾಜನನ್ನು ತೊರೆದು ಏಕಾಂಗಿಯಾಗಿ ಹೋರಟು ಕಲ್ಯಾಣ ಅನುಭವಮಂಟಪಕ್ಕೆ ಬಂದು ನಂತರ ಕದಳಿಯಲ್ಲಿ ಐಕ್ಯವಾಗುವವರೆಗೂ ಎಲ್ಲಿಯೂ ಶಿವನನ್ನು (ಚನ್ನಮಲ್ಲಿಕಾರ್ಜುನನ್ನು) ತನ್ನ ಸಹಾಯಕ್ಕೆ ಕರೆಯಲ್ಲಿಲ್ಲ ಅಕ್ಕ. ಅವನ ನಾಮಸ್ಮರಣೆಯಲ್ಲೇ ಹೋರಾಟವನ್ನ ಪ್ರೀತಿಯನ್ನು ಭಕ್ತಿಯನ್ನು ದಿಟ್ಟತನವನ್ನ ಲೋಕಕ್ಕೆ ತೋರಿಸಿದವಳು ಅಕ್ಕಮಹಾದೇವಿ. ಅದಕ್ಕಾಗಿ ಇವಳ ವ್ಯಕ್ತಿತ್ವ ಉತ್ತುಂಗ ಸ್ಥಾನದಲ್ಲಿ ಎಲ್ಲರು ಮನಸ್ಸನ್ನು ಸೋರೆಗೊಳ್ಳಲು ಕಾರಣವಾಗಿದೆ ಎಂದು ಹೇಳಬಹುದು.

### 4.1 ಧಾರ್ಮಿಕ ಸಂವೇದನೆ:

ಸಾಮಾಜಿಕವಾಗಿ, ರಾಜಕೀಯವಾಗಿ, ಕ್ಷಿಪ್ರಪಲ್ಲಟದ ಕಾಲದಲ್ಲಿ ಅಕ್ಕಮಹಾದೇವಿ ತನ್ನ ಹೋರಾಟದ ಬದುಕನ್ನು ಆರಂಭಿಸಿದ್ದು, ಆಧ್ಯಾತ್ಮಿಕವಾಗಿ ಕೂಡ ಪುರುಷ ಪ್ರಾಬಲ್ಯ ಅಧಿಕವಾಗಿದ್ದಾಗ ತನ್ನದೇ ಆದ ಅಸ್ತಿತ್ವವನ್ನು, ಆಧ್ಯಾತ್ಮದ ಹಾದಿಯನ್ನು ಅಕ್ಕಮಹಾದೇವಿ ಹುಡುಕಿಕೊಂಡಳು. ಹೀಗಾಗಿ ಅಕ್ಕನ ಬದುಕೇ ಒಂದು ರೀತಿ ಆಧ್ಯಾತ್ಮದ ಹೋರಾಟ ಎನ್ನಬಹುದು. ಪರಮಾತ್ಮನನ್ನು ಒಲಿಸಿಕೊಳ್ಳುವ, ಪ್ರೀತಿಸುವ, ದೈವಿಕವಾಗಿ ಪ್ರೇಮಿಸುವ ಹಾಗೂ ಆಕಾರ - ನಿರಾಕಾರನಾದ ಅವನನ್ನು ಧ್ಯಾನಿಸುವ ತಪಸ್ಸು,

ಭಕ್ತಿ ಪ್ರಾರ್ಥನೆಗಳ ಮೂಲಕ ಅವನನ್ನು ತಲುಪುವ ಹೋರಾಟ, ಹಾಗೂ ನಿರಂತರವಾಗಿ ತನ್ನನ್ನು ತಾನು ಒರಗೆ ಹಚ್ಚಿನೋಡುವ ಆತ್ಮಸಾಕ್ಷಾತ್ಕಾರಿಸಿಕೊಳ್ಳುವ ದಿವ್ಯ ಚೇತನ ಅಕ್ಕನದು. ಪರಮಾತ್ಮನನ್ನು ಕುರಿತು ಭಕ್ತಿ - ಆರಾಧನೆಗಳಿಗೆ ಅಂತ್ಯವಿಲ್ಲ. ಅದು ನಿರಂತರ ಸಾಧನೆಯ ದುರ್ಗವಾದ ಹಾದಿ ಎಂಬುದು ಅಕ್ಕನ ಅನುಭವದ ಜೀವನದಿಂದ ತಿಳಿಯುತ್ತದೆ. ಲೌಕಿಕದ ಬದುಕನ್ನು ನಿಕೃಷ್ಟನಾಗಿ ತೊರೆದು "ಸಾವಿಲ್ಲದ, ಕೇಡಿಲ್ಲದ, ರೂಪವಿಲ್ಲದ, ಕೊನೆ ಇಲ್ಲದ, ಕುರುಹು ಇಲ್ಲದ, ಭವ-ಭಯಗಳಿಲ್ಲದ, ಕುಲಸೀಮೆಯಿಲ್ಲದ, ನಿಸ್ಸೀಮ ಚೆಲುವ ಚನ್ನಮಲ್ಲಿಕಾರ್ಜುನನ ನನ್ನ ಗಂಡನೆಂದು" ಅವನಿಗಾಗಿಯೇ ಬದುಕಿದ ತನು-ಮನ-ಭಾವ ಶುದ್ಧಿಗಳಿಂದ ಅವನನ್ನು ಒಲಿಸಿಕೊಂಡ ದಿಟ್ಟ ಅಕ್ಕಮಹಾದೇವಿ. ವಿಜಯಕುಮಾರ್ ಮಹಾನುಭಾವಿಗಳು ಹೇಳುವಂತೆ "ವ್ಯಕ್ತಿಯಾಗಿ, ಶಕ್ತಿಯಾಗಿ ವಿರಾಗ್ರಹಿಣಿಯಾಗಿ, ಶರಣೆಯಾಗಿ, ಮಹಾತಪಸ್ವಿಯಾಗಿ, ಮಹಾಚೇತನವಾಗಿ, ಗುರುವಾಗಿ, ಮನುಷ್ಯ ಲೋಕದ ಯುಗವತಾರಿಯಾಗಿ ದಿವ್ಯ ಜೀವನ ನಡೆಸಿದ ಬೆಳಗು ಅಕ್ಕಮಹಾದೇವಿ." ಈ ಮಾತುಗಳ ಉತ್ಪ್ರೇಕ್ಷತೆಯಲ್ಲಿ ಅಕ್ಕನ ಬದುಕೆ ದೊಡ್ಡ ನಿದರ್ಶನ.

ಅಕ್ಕಮಹಾದೇವಿ ಸವೆಸಿದ ಆಧ್ಯಾತ್ಮದ ಹಾದಿಯನ್ನು ಎರಡು ಕವಲುಗಳಲ್ಲಿ ವಿಂಗಡಿಸಿಕೊಳ್ಳಬಹುದು. ಮೊದಲನೆಯದಾಗಿ ಅಕ್ಕಮಹಾದೇವಿ ಚನ್ನಮಲ್ಲಿಕಾರ್ಜುನನಿಗಾಗಿ ಕಾತರಿಸಿ, ಹಂಬಲಿಸಿ, ವಿರಹಿಸಿ, ನೊಂದು-ಬೆಂದು ಹಾಡುವ ವಚನಗಳು ಭಗವಂತನ ಕುರಿತ ದೈವಿಕವಾದ ಪ್ರೇಮಾಭಿಲಾಕ್ಷೆಗಳಲ್ಲಿ ಅಂತೆಯೇ ಸ್ತ್ರೀಸಹಜವಾದ ಆಸೆ-ಆಕಾಂಕ್ಷೆಗಳನ್ನು ವ್ಯಕ್ತ ಪಡಿಸುವ ವಚನಗಳು. ಇವು ಚೆನ್ನಮಲ್ಲಿಕಾರ್ಜನನ್ನು ಕುರಿತು ಇರುವುದರಿಂದ ಭಕ್ತಿಯ ವಿಷಯಕ್ಕೆ ಬಂದಾಗ ಶ್ರೇಷ್ಠವೆನಿಸಿಕೊಳ್ಳುತ್ತದೆ.

ಎರಡನೇಯದಾಗಿ ಚನ್ನಮಲ್ಲಿಕಾರ್ಜನನ್ನು ಗುರುವಾಗಿ, ತಂದೆಯಾಗಿ, ಶರಣಾಗುವ ವಚನಗಳಲ್ಲಿ ಅಕ್ಕಮಹಾದೇವಿಯ ಅನುಭವ ಜೀವನದ ಔಚಿತ್ಯ, ಪರಿಪೂರ್ಣತೆ, ಭಗವಂತನನ್ನು ಸಾಕ್ಷತ್ಕರಿಸಿದ ರೀತಿಯನ್ನು ಕಾಣಬಹುದು.

ಅಕ್ಕಮಹಾದೇವಿ ಬಳ್ಳಿಗಾವೆಯನ್ನು ತೊರೆದು ಹೊರಟಿದ್ದು, ಚೆನ್ನಮಲ್ಲಿಕಾರ್ಜುನ ಸ್ಥಳ ಶ್ರೀಶೈಲಕ್ಕೆ ಆದರೆ ಅಕ್ಕಮಹಾದೇವಿಗೆ ಶ್ರೀಶೈಲದ ಹಾದಿ ತಿಳಿದಿಲ್ಲ. ತನಗೆ ತೋಚಿದಂತೆ ಹೊರಟ ಅಕ್ಕ ಬಂದದ್ದು, ಬಾಲ್ಯಕಾಲದಲ್ಲಿ ನೋಡಿದ್ದ ಪ್ರಭುದೇವರ ಗುರುಕುಲಾಶ್ರಮ ಜೋಗಜಲಪಾತಕ್ಕೆ. ಇಲ್ಲಿಂದ ಅಕ್ಕನ ಬದುಕು, ಸಾಧನೆ, ಸಿದ್ಧಿಗಳಿಗೆ ಹೊಸ ನೆಲೆಯು ಸಿಕ್ಕಂತಾಯಿತು. ಅಲ್ಲಿದ್ದ ಜಂಗಮರ, ಶರಣರ ಮಾರ್ಗದರ್ಶನ ಅಕ್ಕನ ಉದ್ದೇಶಗಳಿಗೆ, ಧೈಯ, ಗುರಿಗಳಿಗೆ ನಿರ್ಧಿಷ್ಠ ರೂಪವನ್ನೇ ಕೊಟ್ಟವೆನ್ನಬಹುದು. ಅದುವರೆಗೂ ಅಕ್ಕನದು ಒಂದು ರೀತಿಯ ಮುಗ್ಧಭಕ್ತಿ ಭಗವಂತ ಮಾನವ ಸ್ವರೂಪಿಯಂತವನೆ ಎಂದು ತಿಳಿದು ಅವನೆ ನನ್ನ ಗಂಡ ಎಂದು ಆರಾಧಿಸುತ್ತಿದ್ದಳು. ಆದರೆ ಇದು ಭ್ರಮೆ. ಭಗವಂತ ನಿರಾಕಾರ ಎಂಬುದನ್ನು ತನ್ನ ಸಾಧನೆಯಿಂದ ತಿಳಿದು, ಮುಂದೆ ಶರಣೆಯಾಗಿ ಗುರುವಾಗಿ, ತನ್ನ ಜೀವನ ನಡೆಸಿದ್ದು

ಕಂಡು ಬರುತ್ತದೆ. ಮುಂದೆ ಪ್ರಭುದೇವರ ಗುರು ಕುಲಾಶ್ರಮ ತೊರೆದು ಶರಣರಿಗೆಲ್ಲಾ ತವರಿನಂತಿದ್ದ ಕಲ್ಯಾಣವನ್ನು ಸೇರುತ್ತಾಳೆ. ಅಲ್ಲೂ ಕೂಡ ತನ್ನ ಅನುಭವ ಜೀವನದ ಶ್ರೇಷ್ಠಗಳಿಗೆಗಳ ಕಳೆದು ಚೆನ್ನಮಲ್ಲಿಕಾರ್ಜುನನನ್ನು ಹುಡುಕುತ್ತಾ ಶ್ರೀಶೈಲಕ್ಕೆ ಪ್ರಯಾಣ ಬೆಳಸುತ್ತಾಳೆ. ಹೀಗೆ ನಡೆದ ಅಕ್ಕನ ಆಧ್ಯಾತ್ಮದ ಹಾದಿ ವಚನಗಳಲ್ಲಿ ಯಾವ ಸ್ವರೂಪದಲ್ಲಿ ವ್ಯಕ್ತವಾಗಿದೆ ಎಂಬುದನ್ನು ಇಲ್ಲಿ ವಿಶ್ಲೇಷಿಸಲಾಗುವುದು.

ಮಹಾದೇವಿಯಕ್ಕನಿಗೆ 'ಚೆನ್ನಮಲ್ಲಿಕಾರ್ಜುನನ' ಉಳಿದಂತೆ ಬೇರೆ ವಿಷಯವಿಲ್ಲ. ಅನ್ಯತ ಬೇರೆ ಯೋಚಿಸಲಾರಳು. ಬೇರೆ ಚಿಂತಿಸಲಾರಳು, ಪೂಜಿಸಲಾರಳು ಮತ್ತು ಬೇರೇನನ್ನು ಪ್ರಾರ್ಥಿಸಲಾರಳು. ಅಕ್ಕನ ತನು ಮನ ಸರ್ವಸ್ವವೆಲ್ಲಾ ಚನ್ನಮಲ್ಲಿಕಾರ್ಜುನನೆ ತುಂಬಿಕೊಂಡಿದ್ದಾನೆ. ಅವನೆ ಅವಳ ಪತಿ, ಒಡೆಯ, ಗುರು, ತಂದೆ ಪ್ರೇಮಿ, ಎಲ್ಲಾ-ಎಲ್ಲಾವು ತನ್ನ ಆರಂಭದ ಮುಗ್ಧ ಭಕ್ತಿಲೀ ಚೆನ್ನಮಲ್ಲಿಕಾರ್ಜುನನ್ನು ಬೇಡುವ ವಚನ ಹೀಗಿದೆ.

'ನಚ್ಚುಗೆ ಮನೆ ನಿಮ್ಮಲ್ಲಿ ಮೆಚ್ಚುಗೆ ಮನ ನಿಮ್ಮಲ್ಲಿ!
ಸಲುಗೆ ಮನ ನಿಮ್ಮಲ್ಲಿ ಸೋಲುಗೆ ಮನ ನಿಮ್ಮಲ್ಲಿ!
ಅಳಲುಗೆ ಮನ ನಿಮ್ಮಲ್ಲಿ ಒಳಲುಗೆ ಮನ ನಿಮ್ಮಲ್ಲಿ!
ಈರಗುಣೆ ಮನ ನಿಮ್ಮಲ್ಲಿ ಕೊರಗುಗೆ ಮನ ನಿಮ್ಮಲ್ಲಿ!
ಎನ್ನ ಪಂಚೇಂದ್ರಿಯಗಳೂ ಕಬ್ಬುನ ಉಂಡ ನೀರಿನಂತೆ!
ನಿಮ್ಮಲ್ಲಿ ಬೆರಸುಗೆ ಚೆನ್ನಮಲ್ಲಿಕಾರ್ಜುನಯ್ಯ.'[೧]

ಸರಳವಾದ, ಸುಂದರವಾದ, ಭಾವಗೀತಾತ್ಮಕವಾದ ಈ ವಚನ ಚನ್ನಮಲ್ಲಿಕಾರ್ಜುನನ್ನು ಪತಿಯಾಗಿ ಪಡೆಯಲೇಬೇಕೆಂಬ ಉತ್ಕಟ ಹಂಬಲದಲ್ಲಿ ಮೂಡಿದೆ. ಆ ಭಗವಂತನಿಗಾಗಿ ಕಾತರಿಸಿರುವ ಮನಸ್ಸು ಎಷ್ಟು ವಿಧದಲ್ಲಿ ಸೋತಿದೆ. ದೈವಿಕವಾದ ಪ್ರೇಮವಿಲ್ಲ ವಿವಿಧ ಬಗೆಯಲ್ಲಿ ಭಗವಂತನನ್ನು ಸೇರಲು, ಪಡೆಯಲು ನೀರು ಕುಡಿಯುವಂತೆ ನನ್ನ ಪಂಚೇಂದ್ರಿಯಗಳು ನಿಮ್ಮಲ್ಲಿ ಒಂದಾಗುವುದಕ್ಕಾಗಿ ಕಾದಿವೆ. ಶ್ರೇಷ್ಠವಾದ ಶೃಂಗಾರ ಕಾವ್ಯದಂತಿರುವ ಈ ವಚನ ಅಕ್ಕನಿಗೆ ಭಗವಂತನ ಬಗೆಗೆ ಇರುವ ಪೇಮವನ್ನು ತಿಳಿಸುತ್ತದೆ.

ಇಷ್ಟೆಲ್ಲಾ ಹಂಬಲಿಸಿಯೂ ಭಗವಂತ ಕಾಣದಿದ್ದಾಗ, ಸಹಜವಾಗಿ ವಿರಹದಲ್ಲಿ ನೊಂದು ಚೆನ್ನಮಲ್ಲಿಕಾರ್ಜುನನಿಗೆ ಕರಗಿ, ಕೊರಗಿ, ಸೊರಗಿ ವಿಧ-ವಿಧವಾಗಿ ತನ್ನ ಪ್ರೇಮದ ವಿರಹವನ್ನು ಅಕ್ಕ ತನ್ನ ವಚನಗಳಲ್ಲಿ ಕಟ್ಟಿಕೊಟ್ಟಿದ್ದಾಳೆ.

---

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೬೬-ಪುಟ-೬೧ (೧೯೬೬)

'ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವ!
ಏರಿಲ್ಲದ ಪ್ರಾಯದಲ್ಲಿ ನೊಂದೆನವ್ವ
ಸುಖವಿಲ್ಲದ ಧಾವತಿಗೊಂಡನೆವ್ವ
ಚೆನ್ನಮಲ್ಲಿಕಾರ್ಜುನ ದೇವಂಗೊಲಿದು
ಬಾರದ ಭವಂಗಳಲಿ ಬಂದೆನವ್ವ' ೧

ಈ ವಚನದಲ್ಲಿ ಇರುವ ಒಂದೊಂದು ಹೋಲಿಕೆಯು ಅಕ್ಕನ ವಿರಹದ ಉರಿಯನ್ನು ಹೇಳುತ್ತಿವೆ. ಚೆನ್ನಮಲ್ಲಿಕಾರ್ಜನನ್ನು ಪ್ರೀತಿಸಿದಕ್ಕೆ ಆತನೇ ತನ್ನ ಪತಿಯೆಂದು ನಂಬಿದಕ್ಕೆ ಬರಬಾರದ ನೋವೆಲ್ಲಾ ಬಂದವು. ಅವನಿಗಾಗಿ ಎಷ್ಟು ಜನ್ಮಗಳಲ್ಲಿ ಹುಟ್ಟಿ ಬಂದಿರುವೆನು. ಒಂದಿಷ್ಟು ಸುಖವಿಲ್ಲದೆ ನೋಯುತ್ತಿರುವೆ. ಆದರೂ ಅವನಿಗೆ ನನ್ನ ಮೇಲೆ ಪ್ರೀತಿಬಾರದು ಎನ್ನುವ ಈ ವಿರಹದ ವೇದನೆಯು ಅಪೂರ್ವ ಕಾವ್ಯದಂತಿದೆ. ಉತ್ಕಟವಾದ ಭಕ್ತಿಯ ಪ್ರೇಮ, ವಿರಹಗಳು ಒಟ್ಟು ಕನ್ನಡ ಸಾಹಿತ್ಯದಲ್ಲೆ ಇಷ್ಟು ತೀವ್ರತರವಾಗಿ ಬಂದಿರುವುದು ಅಕ್ಕನ ವಚನಗಳಲ್ಲಿ ಸಂಪೂರ್ಣವಾಗಿ ತನ್ನನ್ನು ತಾನು ಅರ್ಪಿಸಿಕೊಳ್ಳುವ ರೀತಿಯು ಈ ವಚನಗಳಲ್ಲಿ ಕಾಣುಬರುತ್ತವೆ. ಅಕ್ಕನ ಪ್ರೇಮ ವಿರಹದಲ್ಲಿಯ ಕಾವ್ಯಗಳು ಶರಣಸತಿ ಲಿಂಗಪತಿ ಯಾದದ್ದನ್ನು ಹೇಳುತ್ತವೆ. ಅಕ್ಕಮಹಾದೇವಿ ನಿಜ ಅರ್ಥದಲ್ಲಿ ಭಗವಂತನ ಸತಿ ಎನ್ನಬಹುದು. ಭಗವಂತನಿಗೆ ಶರಣಸತಿ ಲಿಂಗಪತಿಯಾದದ್ದನ್ನು ಈ ವಚನದಲ್ಲಿ ಹೇಳಲಾಗಿದೆ.

' ಅಂಗವ ಲಿಂಗಮುಖದಲ್ಲಿ ಅರ್ಪಿಸಿ ಅಂಗ ಅಲಿಂಗನವಾಯಿತ್ತು.
ಮನದ ಅರಿವಿನಿಂದರ್ಪಿಸಿ ಮನ ಲಯವಾಯಿತ್ತು.
ಭಾವದ ತೃಪ್ತಿಗರ್ಪಿಸಿ ಭಾವ ಬಯಲಾಯಿತ್ತು.
ಅಂಗಮನದ ಬಾವವಳಿದ ಕಾರಣ ಕಾಯ ಅಕಾಯವಾಯಿತ್ತು.
ಎನ್ನ ಅಕಾಯದ ಸುಖವು ಲಿಂಗ ಭೋಗಿಸುವನಾಗಿ
ಶರಣಸತಿ ಲಿಂಗಪತಿಯಾದೆನು.' ೨

ಇದು ಕಾರಣ ಚನ್ನಮಲ್ಲಿಕಾರ್ಜುನನೆಂಬ ಗಂಡನ ಒಳಹೊಕ್ಕು ಬೆರಿಸಿದೆನು. ಭಗವಂತನಿಗೆ ಅರ್ಪಿಸಿಕೊಳ್ಳುವ ಸಂಪೂರ್ಣ ಶರಣಗಾತಿಯನ್ನು ಈ ವಚನ ಹೇಳುತ್ತದೆ. ಶರಣ ಸತಿ ಲಿಂಗಪತಿಯಾದ ಭಾವ ವಿಚಾರಗಳು ವ್ಯಕ್ತವಾಗಿವೆ. ಭಗವಂತನಿಗೆ ಸತಿಯಾಗಬೇಕೆಂದರೆ ಯಾವ ರೀತಿ ಅಂತರಂಗ ಶುದ್ಧಿ, ಬಹಿರಂಗಶುದ್ಧಿ, ಭಾವಶುದ್ಧಿಗಳು ಬೇಕು ಎಂಬುವುದನ್ನು ಅಕ್ಕ ಹೇಳುತ್ತಾಳೆ. 'ದೇಹವನ್ನು ಲಿಂಗಕ್ಕೆ ಅರ್ಪಿಸಿದಾಗ, ಅದು ಇಂದ್ರಿಯಾದಿ ಗುಣಗಳ ಕಳೆದುಕೊಳ್ಳುತ್ತವೆ' ಮನಸ್ಸನ್ನು ಅರಿವಿನ ಅರಿಗೋಲಿನಲ್ಲಿ ಮುನ್ನಡೆಸಿದರೆ, ಅದು 'ಭವ'ದ ಬಯಕೆಗಳ ನೀಗಿಸಿಕೊಂಡು, ಭಗವಂತನ ಕುರಿತಾದ ಸಂತೃಪ್ತದ ನೆಲೆಗೆ ಬಂದು ನಿಲ್ಲುತ್ತದೆ.

---

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೬೯-ಪುಟ-೬೩ (೧೯೬೬)
೨. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೬೬-ಪುಟ-೫೬ (೧೯೬೬)

ಹೀಗೆ ದೇಹ, ಮನಸ್ಸು, ಭಾವಗಳು, ಬಯಕೆಗಳು ಎಲ್ಲಾ ಒಂದಾಗಿ ಲಿಂಗ ಕ್ರಿಯೆಯಲ್ಲಿ ತೊಡಗಿದ ಮೇಲೆ ಇನ್ನೇನಿದೆ? ಅಲ್ಲಿ ತಾನು, ತನ್ನದು, ತನಗಾಗಿ ಎಂಬುದು ಏನು ಇಲ್ಲ. ಎಲ್ಲವೂ ಭಗವಂತನಿಗೆ ಅರ್ಪಿತ. ಅಂಗವೂ ಸತಿಯಾದರೆ, ಅರಿವು ಪತಿಯಾಗುವುದು. ನಿಸ್ವಾರ್ಥದ ಭಕ್ತಿ, ಪ್ರೀತಿ, ಪ್ರಾರ್ಥನೆಯೂ ಇಲ್ಲಿದೆ. ದೇಹ ಭಾವವನ್ನು ತೊರೆದು ಪರಮಾತ್ಮ ಭಾವದಿಂದ ಈ ವಚನವನ್ನು ಹಾಡಿಕೊಂಡಿದ್ದಾಳೆ.

ಆರಂಭದಲ್ಲಿ ಅಕ್ಕಮಹಾದೇವಿ . 'ಇಷ್ಟ ಲಿಂಗ ಪೂಜೆ'ಯಲ್ಲಿ ಭಗವಂತನ ಸ್ವರೂಪವನ್ನು ಭಗವಂತನನ್ನು ಕಾಣತೊಡಗಿದಳು. ಈ ಇಷ್ಟಲಿಂಗ ಪೂಜೆಯನ್ನ ಯಾರು ಬೇಕಾದರೂ ಮಾಡಬಹುದು 'ಜಂಗಮ' ಧಾರಣೆಯನ್ನುವುದು ಅದರ ಹಾದಿ ಬಲು ಕಠಿಣ. ಜಂಗಮನಾಗುವುದು ಬರಿ ವೇಷ ಹಾಕುವುದರ ಮೂಲಕವಲ್ಲ. ಅದು ಹುಟ್ಟಿನಿಂದಲೂ ಬರುವುದಿಲ್ಲ. ಜಂಗಮಧಾರಣೆ ಬರುವುದು ಆಚಾರ-ವಿಚಾರ ಹಾಗೂ ವ್ಯಕ್ತಿತ್ವದಿಂದ. ಅಕ್ಕಮಹಾದೇವಿಯು ಶ್ರೇಷ್ಠ ಜಂಗಮಳು ಹಾಗಯೇ, ಮಹಾವಿರಾಗಿಣಿಯೂ ಹೌದು. ಜಂಗಮರ, ಶರಣರ ಸಂಘದಿಂದ, ಅವರ ಸೇವೆಯಿಂದ, ಅವರ ಮಾರ್ಗದರ್ಶನದಿಂದ ಅಕ್ಕ ಪರಮಾತ್ಮನನ್ನು ಸೇರಲು ಒಂದೊಂದೆ ಮೆಟ್ಟಲನ್ನು ಏರುತ್ತಾ-ಏರತ್ತಾ ತಾನೆ ಜಂಗಮಳಾಗಿ, ಮಹಾಗುರುವಾಗಿ ಜಗಜ್ಯೋತಿಯಾದಳು. ಜಂಗಮರ ಬಗೆಗೆ ಅವಳಿಗಿದಂತಹ ಪ್ರೀತಿಗೆ ಈ ವಚನವೇ ಸಾಕ್ಷಿಯಾಗಿದೆ.

'ಜಂಗಮವೆನ್ನ ಪ್ರಾಣ, ಜಂಗಮವೆನ್ನ ಜೀವ!
ಜಂಗಮವೆನ್ನ ನಿದಿನಿಧಾನ!
ಜಂಗಮವೆನ್ನ ಹರುಷದ ಮೇರೆ!
ಚೆನ್ನಮಲ್ಲಿಕಾರ್ಜುನ,
ಜಂಗಮದ ತಿಂಥಿಣಿಯಲ್ಲಿ ಓಲಾಡುವೆ!'[೧]

ಜಂಗಮವೆಂದರೆ ಅರಿವು ಆಚಾರಗಳ ನಿಧಿ. ಅವರು ಭಗವಂತನಿಗೆ ತುಂಬಾ ಸಮೀಪದವರು. ಇಂತಹ ಶರಣರ ಜಂಗಮರ ದರ್ಶನ ದೊರೆಯುವುದು ಅಪೂರ್ವ ಇಂತಹ ಮಹಾತ್ಮರ ಅನುಭವ ದೊರೆಯವುದು ಅಪೂರ್ವ. ಗುರುಲಿಂಗಜಂಗಮ ಸೇವೆಯು ಕೂಡ ಅಪೂರ್ವ. ಮಹಾತ್ಮರ ಸೇವೆಯೂ ಒಂದು ಭಾಗ್ಯ, ಪುಣ್ಯ ಎಂದು ಭಾವಿಸಿದ್ದಾಳೆ. "ಮನುಷ್ಯ ಜನ್ಮ ಗುರುದರ್ಶನ, ಗುರು ಕಾರುಣ್ಯ, ಗುರುಲಿಂಗ ಜಂಗಮಸೇವೆ, ಮಹಾಶರಣರ ಅನುಭವ ಗೋಷ್ಠಿ, ಇವೆಲ್ಲವೂ ಒಂದೇ ಜನ್ಮದಲ್ಲಿ ಸಿಕ್ಕಿವೆ. ಕುಣಿ, ಜಿಗಿ, ನಲಿದಾಡು. ಇದು ಭಾಗ್ಯ, ಇದು ಭಾಗ್ಯ"[೨] ಎಂದು ಅಕ್ಕ ತನ್ನ ಅಂತರಾಳದ ಭಾವನೆಯನ್ನು ವ್ಯಕ್ತಪಡಿಸಿದ್ದಾಳೆ.

ಅಕ್ಕಮಹಾದೇವಿಯ ಅನುಭವದಲ್ಲಿ ಜೀವನ ನಿರಂತರ, ಸತ್ಯಶೋಧನೆಯ ಹುಡುಕಾಟದಲ್ಲಿ ಸಾಧನೆಯಲ್ಲಿ ತೊಡಗಿ ಅದು ಪರಿಪೂರ್ಣತೆಯತ್ತ ನಡೆಯತೊಡಗಿದೆ. ಇದು ಅಕ್ಕನ ಅನುಭವ ಜೀವನದ

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೧೬೯-ಪುಟ-೯೩ (೧೯೬೬)
೨. ಅಕ್ಕಮಹಾದೇವಿಯವರ ವಚನ ವ್ಯಾಖ್ಯಾನ-ಡಾ.ವಿಜಯಕುಮಾರಮಹಾನುಭವಿಗಳು-ಪುಟ-೧೭೦ (೨೦೦೪)

ಎರಡನೇಯ ಘಟ್ಟ ಎನ್ನಬಹುದು. ಭಕ್ತಿ, ಆಯುಷ್ಯ, ಉದ್ದೇಶ, ಗುರಿಗಳ ಕುರಿತು ಕೆಳಗಿನ ವಚನದಲ್ಲಿ ಹೇಳಲಾಗಿದೆ.

'ಘನವ ಕೆಂಡೆ, ಅನುವ ಕಂಡೆ!
ಆಯತ-ಸ್ವಾಯತ-ಸನ್ನಿಹಿತ ಸುಖವ ಕಂಡೆ!
ಅರಿವನರಿದು ಮರಹ ಮರೆದ!
ಕುರುಹಿನ ಮೋಹದ ಮರವೆಯನೀಡಾಡಿದೆ!
ಚೆನ್ನಮಲ್ಲಿಕಾರ್ಜುನ, ನಿಮ್ಮನರಿದು ಸೀಮೆಗಟ್ಟಿನು!' [೧]

ಅಕ್ಕಮಹಾದೇವಿ ಇಷ್ಟಲಿಂಗ ಪೂಜೆಯಲ್ಲಿಯೇ ತಲೀನಳಾಗಿ, ಅವರಲ್ಲಿ ಭಗವಂತನ ಕಾಣಲು ಯತ್ನಿಸಿದಳು. ಆದರೆ ಭಗವಂತನನ್ನು ತಿಳಿಯಲು, ಅದೊಂದು ಮಾರ್ಗ ಅಷ್ಟೆ. ಭಗವಂತನನ್ನು ಸಾಕ್ಷತ್ಕರಿಸಿಕೊಂಡುದ್ದು, ಹಾಗೂ ಸಂತೃಪ್ತಿಯನ್ನು ಈ ವಚನದಲ್ಲಿ ಹೇಳಿಕೊಂಡಿದ್ದಾಳೆ. ಅನುಭವದ ಹಾದಿಯಲ್ಲಿಯೇ ನಡೆದು ಪರಮಾತ್ಮನನ್ನು ಕಂಡಿದ್ದಾಳೆ. ಅವನಲ್ಲಿ ಲೀನವಾಗುವ, ಪೂಜಿಸುವ, ಆನಂದಯೋಗ, ಧ್ಯಾನಯೋಗ, ಪೂಜಾವಿಧಿವಿಧಾನಗಳ ಯೋಗ ಎಲ್ಲವನ್ನು ಅನುಭವಿಸಿಯಾಗಿದೆ. ಅಕ್ಕ ನಿಜವಾಗಿಯೂ ಈಗ ಪರಿಪೂರ್ಣಳು. ಸಂತೃಪ್ತಳು. ತನ್ನ ಗುರಿ ಸಾಧನೆಯ ಶಿಖರವನ್ನು ಮುಟ್ಟಿದ್ದಾಳೆ. ಅಕ್ಕನ ಆಧ್ಯಾತ್ಮದ ಜೀವನದ ಸಾಕ್ಷತ್ಕಾರವಾಗಿರುವುದನ್ನು ಕಾಣಬಹುದು.

ಅಕ್ಕನ ನಿಜಭಕ್ತಿ ಇನ್ನೂ ಪರಿಪೂರ್ಣ ಹೊಂದುವುದನ್ನು ಕಾಣಬಹುದು. ಮೊದಮೊದಲು ಮುಗ್ಧ ಭಕ್ತಿಯಲಿ ಪತಿ ಎಂದು ತಿಳಿದು ಹಂಬಲಿಸಿ ಕಾತರಿಸಿ ಪ್ರೇಮದಲಿ ವಿರಹದಲಿ, ವಚನದಲ್ಲಿ ಬರೆದಿದ್ದಾಳೆ. ಆದರೆ ಇದು ಮುಂದೆ ಪರಿಪೂರ್ಣದೆಡೆಗೆ ಹೊರಟಾಗ, ಭಗವಂತನನ್ನು ಎಷ್ಟೇ ಹುಡುಕಿದರೂ, ಇಚ್ಚೆಪಟ್ಟರು ತಪ್ಪಸ್ಸು ಮಾಡಿದರು. ಚನ್ನಮಲ್ಲಿಕಾರ್ಜುನನ್ನು ಒಲಿಯುವ ಕಾಲಕ್ಕೆ ಒಲಿಯುತ್ತಾನೆ ಎನ್ನುವ ನಿಲುವಿಗೆ ಬರುತ್ತಾಳೆ. ಭಗವಂತನೆಂದರೆ ಯಾರು? ಎಂಬುವುದರ ಬಗೆಗೆ ಹಿಂದಿನಿಂದಲೂ ನಮ್ಮ ವೇದ, ಪುರಾಣ, ಶಾಸ್ತ್ರ, ಗ್ರಂಥಗಳಲ್ಲಿ ವಿವಿಧ ರೀತಿಯ ಚಿಂತನೆಗಳಾಗಿವೆ. ಆದರೆ ಅಕ್ಕ ಕಂಡುಕೊಳ್ಳುವ ಆ ಭಗವಂತನೆಂದರೆ "ಅತ್ತಲಿತ್ತ ಹರಿಯುವ ಮನದ ಶಿರವನರಿದಡೆ, ಬಚ್ಚ ಬರಿಯ ಬಯಲು ಚನ್ನಮಲ್ಲಿಕಾರ್ಜುನ". [೨] ಅಲೆಯುವ ಮನಸ್ಸನ್ನು ಸೀಮಿತಕ್ಕೆ ತಂದುಕೊಂಡರೆ ಅದರ ಮೂಲಕ ನೆಲೆಯ ಅರಿತರೆ ಪರಮಾತ್ಮನನ್ನು ತಿಳಿದಂತೆಯೇ. ಅಷ್ಟಕ್ಕೂ ಚನ್ನಮಲ್ಲಿಕಾರ್ಜನನೆಂದೆರೆ ಯಾರು? 'ಬಚ್ಚ ಬರಿಯ ಬಯಲು' ಎನ್ನುತ್ತಾಳೆ. ಮತ್ತಿನ್ನೊಂದು ವಚನದಲ್ಲಿ -

'ತನುವ ಮೀರಿತ್ತು ಮನವ ಮೀರಿತ್ತು !
ಮಹನ ಮೀರಿತ್ತು !
ಅಲ್ಲಿಂದತ್ತ ಭಾವಿಸುವ ಭಾವಕರಿಲ್ಲಾಗಿ ತಾರ್ಕಣೆಯಿಲ್ಲ
ಚೆನ್ನಮಲ್ಲಿಕಾರ್ಜುನಯ್ಯ ಬೆರಸಲಿಲ್ಲದ ನಿಜತತ್ವವು.' [೩]

ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೫೮-ಪುಟ-೫೮ (೧೯೬೬)
ಅಕ್ಕಮಹಾದೇವಿಯವರ ವಚನ ವ್ಯಾಖ್ಯಾನ-ಡಾ.ವಿಜಯಕುಮಾರಮಹಾನುಭವಿಗಳು-ಪುಟ-೧೮೨ (೨೦೦೮)
ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೨೩೧-ಪುಟ-೧೧೯ (೧೯೬೬)

ಚನ್ನಮಲ್ಲಿಕಾರ್ಜುನನನ್ನು ಒಂದು ನಿಜ ತತ್ವ. ಇವನು ತನು, ಮನ, ಧನ, ಭಾವಗಳ, ತರ್ಕಗಳ ಮೀರಿದವನು. ಅಂದರೆ ಯಾವುದಕ್ಕೂ ನೀಲುಕದವನು, ಎಲ್ಲದಕ್ಕೂ ಮೀರಿದವನು. ಮೊದಲೆ ವಿವರಿರಸಿದ ವಚನಗಳಲ್ಲಿ ಕಂಡು ಪುಳುಕಿತಳಾಗುವ ಅಕ್ಕ ಅವನನ್ನು ಬಚ್ಚ ಬರಿಯ ಬಯಲು ಎನ್ನುತ್ತಾಳೆ. ಆದರೆ ಈ ಮೇಲಿನ ವಚನದಲ್ಲಿ ಭಗವಂತನೆಂದರೆ ಯಾವುದೇ ತತ್ವ, ತರ್ಕ, ಭಾವನೆ, ಭಾಷೆಗಳಿಗೆ ನಿಲುಕದನೆಂಬುದನ್ನು ಸ್ಪಷ್ಟಪಟಿಸುತ್ತಾಳೆ. ಅಂದರೆ ಅಕ್ಕನ ಅನುಭವದ ಸಾಧನೆಯ ಹಾದಿಯೂ ನಿರಂತರ ಸತ್ಯ ಶೋಧನೆಯಲ್ಲಿದೆ. ಹಾಗಾಗಿ ಭಗವಂತನಂಬವನನ್ನು ಯಾವುದೇ ಒಂದು ನಿರ್ಧಿಷ್ಟ ತತ್ವದಲ್ಲಿ, ತರ್ಕದಲ್ಲಿ ಬಂಧಿಸದೆ, ಅವನನ್ನು ಅರಿಯುವ ಮನಸ್ಸನ್ನು ಜಾಗೃತವಾಗಿಸಿಕೊಂಡಿರುವುದು ಶ್ರೇಷ್ಠ ಜಂಗಮಳಾಗಿ ಶರಣಿಯಾಗಿ, ಪರಮಗುರುವಾಗಿ ಕಂಡು ಬರುತ್ತಾಳೆ.

ಬಳ್ಳಿಗಾವೆಯಿಂದ ಹೋರಟ ಅಕ್ಕಮಹಾದೇವಿ ಪ್ರಭುದೇವರ ಗುರುಕುಲಾಶ್ರಮ ತಲುಪಿದಳು. ಅಲ್ಲಿಂದ ಹೊರಟು ಕಲ್ಯಾಣವನ್ನು ಸೇರುತ್ತಾಳೆ. ಅಕ್ಕನು ಪ್ರಭದೇವರ ಮಾರ್ಗದರ್ಶನದಲ್ಲಿ ಪ್ರಭುದ್ಧಳಾಗಿದ್ದಾಳೆ. ಅವಳಿಗೆ ಕಲ್ಯಾಣವನ್ನು ನೋಡುವ ಹರಿದಾಸೆ ಇದೆ. ಕಲ್ಯಾಣವನ್ನು ತಲುಪಿದಾಗ ಅವಳು ಹಾಡುವ ವಚನ ಶ್ರೇಷ್ಠವಾಗಿದೆ.

'ಕಲ್ಯಾಣವೆಂಬುದನ್ನರಿಯಲೂ ಹೋಗಬಾರದು
ಆಶ-ಆಮಿಷವಳಿದವರಿಗಲ್ಲದೆ ಕಲ್ಯಾಣದತ್ತಲಡಿಯಡ ಬಾರದು?
ಒಳಗು-ಹೊರಗು ಶುದ್ಧವಾದಗಲ್ಲದೆ ಕಬ್ಬಿಣವ ಹೋಗಬಾರದು
ನಾನೆಂಬುದು ಹರಿದವಂಗಲ್ಲದೆ ಕಲ್ಯಾಣದ ಹೋಗಬಾರದು?
ಒಳಗು ತಿಳಿದು ಚೆನ್ನಮಲ್ಲಿಕಾರ್ಜುನಂಗೊಂಡು
ಉಭಯ ಲಚ್ಚೆಯಳಿದೆನಾಗಿ ಕಲ್ಲಾಣವ ಕಂಡು
ನಮೋ ನಮೋ ಎನುತಿರುದೆನು.'[೧]

ಕಲ್ಯಾಣವನ್ನು ಕುರಿತು ಹೇಳಿದ್ದರೂ ಕೂಡ ತನ್ನನ್ನು ಕುರಿತು ಇದರಲ್ಲಿ ಅಕ್ಕಮಹಾದೇವಿ ಹೇಳಿಕಕೊಂಡಿದ್ದಾಳೆ. ಕಲ್ಯಾಣವೆಂದರೆ ಅದು ಶ್ರೇಷ್ಠ ಜಂಗಮರ ಪರಮಗುರುಗಳ ಶರಣರ ಸ್ಥಳ ಅಲ್ಲಿಗೆ ಹೋಗಬೇಕೆಂದರೆ ಅರ್ಹತೆ ಇರಬೇಕು. ಆಸೆ ಆಮಿಷಗಳನ್ನು ಕಳೆದುಕೊಳ್ಳಬೇಕು. ತನು-ಮನಗಳು-ಶುದ್ಧವಾಗಿರಬೇಕು. ಅಂತಹವರು ಮಾತ್ರ ಕಲ್ಯಾಣವನ್ನು ಪ್ರವೇಶಿಸಬಹುದು. ನಾನು (ಅಕ್ಕಮಾಹಾದೇವಿ) ಹೆಣ್ಣು-ಗಂಡೆಂಬ ಭೇದದ ಲಚ್ಚೆಯನ್ನು ಮೀರಿದ್ದೇನೆ. ಚನ್ನಮಲ್ಲಿಕಾರ್ಜುನನಿಗೆ ..ಲಿದವಳು. ಹೀಗಾಗಿ ಕಲ್ಯಾಣ ಪ್ರವೇಶಿಸಿದ್ದೇನೆ. ಕಲ್ಯಾಣ ನೋಡಿ ಆನಂದವಾಯಿತು. ಕಲ್ಯಾಣದ ದರ್ಶನದಿಂದ ಸಂತೃಪ್ತಳಾಗಿ ಇಲ್ಲಿಂದ ಶ್ರೀಶೈಲದೆಡೆದೆ ಪ್ರಯಾಣ ಬೆಳೆಸುತ್ತಾಳೆ. ಕಲ್ಯಾಣದಲ್ಲಿ ಎಲ್ಲ ಶರಣಶರಣಿಯರ ಪ್ರೀತಿಗೆ ಅಕ್ಕ ಪಾತ್ರಗಳಾಗುತ್ತಾಳೆ.

---

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೧೫೪-ಪುಟ-೮೮ (೧೯೬೬)

"ಅಕ್ಕನ ಸುಂದರ ವಚನಗಳು ಸನ್ನಡತೆ ವೈರಾಗ್ಯ ಅಮೋಘವಾದ ಜ್ಞಾನ, ಸದ್ಭಕ್ತಿ ಸಾಧನೆಗಳಿಂದ ಪ್ರಥಮವಾದ ಅಕ್ಕಮಹಾದೇವಿ ಕಲ್ಯಾಣ ಕಂಡರಿಯದ ಅಪೂರ್ವ ಪ್ರತಿಭೆ- ಪ್ರಭುದೇವ ಮೀರಿಸಿದ ವೈರಾಗ್ಯ, ಜ್ಞಾನ, ಸಾಧನೆಯಿಂದ ಪುರುಷ, ಮಹಿಳೆಯರ ನಡುವೆ ಮಿಗಿಲಾದ ವಿಶ್ವಗುರು".[೧] ಅಕ್ಕಮಹಾದೇವಿ ಶ್ರೀಶೈಲಾದ ಕದಳೀ ವನವನ್ನು ತಲುಪುವೇಳೆಗೆ ಅನುಭಾವ ಜೀವನವನ್ನು ಉನ್ನತ ಸಾಧನೆಯನ್ನು ಮಾಡಿಯಾಗಿದೆ. ಇಲ್ಲಿ ಚೆನ್ನಮಲ್ಲಿಕಾರ್ಜುನನನ್ನು ಕಾಣುವ ಹಾಗೂ ಇಲ್ಲೆ ಐಕ್ಯವಾಗುವ ಗುರುಯೊಂದಿಗೆ ಕದಳಿಗೆ ಬುರುತ್ತಾಳೆ. ಕದಳಿಯ ಗಿಡ-ಮರ, ಕಲ್ಲು-ಮಣ್ಣು ಎಲ್ಲಾದರೂ ಭಗವಂತನನ್ನು ಭಗವಂತನ ಕರುಣೆ ಪ್ರೀತಿಯನ್ನು ಕಾಣುತ್ತಾಳೆ. ಈ ವಚನದ ಸಾಲುಗಳನ್ನು ಗಮನಿಸಬಹುದು.

'ವನವೆಲ್ಲ ಕಲ್ಪತರು ಗಿಡುವೆಲ್ಲ ಮರು ಜೀವಣಿ
ಶಿಲೆಗಳೆಲ್ಲ ಪುರುಷ, ನೆಲವೆಲ್ಲ ಅವಿಮುಕ್ತ ಕ್ಷೇತ್ರ.'[೨]

ಚೆನ್ನಮಲ್ಲಿಕಾರ್ಜುನನಿರುವ ಆ ನೆಲ ಪುಣ್ಯಭೂಮಿ, ಹಾಗಾಗಿ ಇಲ್ಲಿನ ಗಿಡ, ಮರ, ನೀರು, ಕಲ್ಲು, ಮಣ್ಣುಗಳಿಗೆಲ್ಲಾ ವಿಶೇಷ ಶಕ್ತಿ ಇದೆ. ಶ್ರೀಶೈಲ ಕುರಿತು ಅಲ್ಲಿರುವ ಕದಳಿ ವನವನ್ನು ಕುರಿತು ಅಕ್ಕನಿಗೆ ಉನ್ನತವಾದ ಭಾವನೆಗಳಿವೆ. ಅದನ್ನು ಎಷ್ಟು ಕೊಂಡಾಡಿದರೂ ಸಾಲದು ಅಕ್ಕನ ಜೀವನದ ಗುರಿ ಶ್ರೀಗಿರಿಯನ್ನು ಏರುವುದಾಗಿದೆ. ಅದು ಈಗ ಈಡೇರಿದ್ದರಿಂದ ಸಂಪೂರ್ಣ ಸಂತೃಪ್ತಳಾಗಿ ಪ್ರಕೃತಿಯಲ್ಲಿ ಭಗವಂತನನ್ನು ಕಂಡು ಹಾಡಿದ್ದಾಳೆ. ಈ ವಚನದಲ್ಲಿ ಶ್ರೀಶೈಲಕ್ಕೆ ಬಂದ ಮೇಲೆ ಬಂದ ಮಗಳೆದು ಕರುಣದಿಂದ ಬಿಗಯಪ್ಪಿದ್ದರೆ, ಚನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದನು. ಹುಟ್ಟುಸಾವುಗಳನ್ನು ಗೆದ್ದು ಬಂದ ಮಗಳು ಎಂದು ನನ್ನನ್ನು ಕರುಣಿಯಿಂದ ಚೆನ್ನಮಲ್ಲಿಕಾರ್ಜುನನು ತನ್ನ ಹೃದಯದಲ್ಲಿ ಅಡಗಿಸಿಕೊಂಡರೆ ಸಾಕು ಎನ್ನುತ್ತಾಳೆ. ಚೆನ್ನಮಲ್ಲಿಕಾರ್ಜುನನು ತಂದೆ ಎಂದು ಸಂಬೋಧಿಸಿರುವುದನ್ನು ಕಾಣಬಹುದು. ಪರೋಕ್ಷವಾಗಿ ಚನ್ನಮಲ್ಲಿಕಾರ್ಜುನನ ಮಡಿಲಲ್ಲಿ ನೆಮ್ಮದಿಯಾಗಿ ವಿರಮಿಸಲು ಬಯಸುತ್ತಾಳೆ.

"ಗಂಡ ಗಂಡರೆಲ್ಲ ಹೆಂಡಿರಾಗಿ ಆಳುವ ಗುರುವನ ಕಂಡೆ, ಜನವಾದಿ ಶಕ್ತಿಯೆಳು ಬೆರಸಿ ಮಾತನಾಡುವ ಪರಮಗುರು ಚನ್ನಮಲ್ಲಿಕಾರ್ಜುನನ ಕಂಡು ಬದುಕಿದನು."[೩] ಇದರಲ್ಲಿ ಚನ್ನಮಲ್ಲಿಕಾರ್ಜುನನ್ನು ಕಂಡ ಸಂತೃಪ್ತ ಭಾವವಿದೆ. ವೀರಾಧಿವೀರಾರನ್ನೆಲ್ಲಾ ಆಳುವ ವೀರನ ಕಂಡೆ. ಜಗವನ್ನು ಆಳುವ ಶಕ್ತಿಯಿರುವ ಆ ಆದಿಶಕ್ತಿಯನ್ನು ಅವನಲ್ಲಿ ಕಂಡೆ. ಪರಮಗುರು ಅವನು ಅಂತಹ ಪರಮಾತ್ಮ ದರ್ಶನದಿಂದ ಕಲತಾರ್ಥಳಾಗಿದ್ದಾಳೆ ಅಕ್ಕಮಹಾದೇವಿ.

ಅಕ್ಕಮಹಾದೇವಿಯ ಆಧ್ಯಾತ್ಮ ಜೀವನ ಬಳ್ಳಿವಾವೆಯಲ್ಲಿ ಆರಂಭವಾಗಿ ಸಾಧನೆಯ ಹಾದಿಯಲ್ಲಿ ನಡೆದು ಶ್ರೀಶೈಲದಲ್ಲಿ ಮುಕ್ತಾಯವಾಗುತ್ತದೆ. ಪೂಜೆ, ಭಕ್ತಿ, ಪ್ರೀತಿ, ಪ್ರೇಮ, ಅನುಭವ ಆಧ್ಯಾತ್ಮಗಳಲ್ಲಿ ಇನ್ನೊಂದು ಹೆಸರು ಅಕ್ಕಮಹಾದೇವಿಯೇ ಹೆಣ್ಣಾದವಳಿಗೆ ಅನುಭವ ಜೀವನ ಬಲುಕಷ್ಟ ಎಂದೆ

೧. ಅಕ್ಕಮಹಾದೇವಿಯುವರ ವಚನ ವ್ಯಾಖ್ಯಾನ-ಡಾ.ವಿಜಯಕುಮಾರಮಹಾನುಭವಿಗಳು-ಪುಟ-೨೪೭ (೨೦೦೪)
೨. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೨೭೪-ಪುಟ-೧೩೫ (೧೯೭೭)
೩. ಅಕ್ಕಮಹಾದೇವಿಯುವರ ವಚನ ವ್ಯಾಖ್ಯಾನ-ಡಾ.ವಿಜಯಕುಮಾರಮಹಾನುಭವಿಗಳು-ಪುಟ-೨೫೭ (೨೦೦೪)

ಂಬಲಾಗಿತ್ತು. ಆದರೆ ಇದನ್ನು ಸಾಧಿಸಿ ತೋರಿಸಿದ ಶ್ರೇಷ್ಠಳು ಅಕ್ಕಮಹಾದೇವಿ. ಅನುಭವದ ಜೊತೆ-ಜೊತೆಗೆಯೇ ದಟ್ಟವಾದ ಜೀವನಾನುಭವಗಳು, ಲೋಕದ ರೀತಿ-ನೀತಿಗಳನ್ನು ಕೂಡ ಅಕ್ಕ ತನ್ನ ವಚನಗಳಲ್ಲಿ ದಾಖಲಿಸಿದ್ದಾಳೆ. ಆಗಿನ ಶ್ರೇಷ್ಠರೆನಿಸಿದ ಪ್ರಭುದೇವರು ಬಸವಣ್ಣ, ಚೆನ್ನಬಸವಣ್ಣ ಮುಂತಾದವರಿಗೆಲ್ಲ ಸರಿಸಮನಾಗಿ ನಿಲ್ಲುವ ಅಕ್ಕ ಮಹಾತಪಸ್ವಿ ಮಹಾವೈರಾಗ್ಯ ಮೂರ್ತಿ ಎನ್ನಬಹುದು.

"ತಾಯಿ ದೇವರೆಂದು ವೇದ ಹೇಳಿತು. ಹೆಣ್ಣೇದೇವರೆಂದು ವಚನಧರ್ಮ ಸಾರಿತು. ಅಕ್ಕನ ಭಕ್ತಿ ದ್ರೌಪದಿಯ ಭಕ್ತಿಯಂತಲ್ಲ. ದ್ರೌಪದಿಗೆ ತನ್ನ ಕಷ್ಟ ಕಾಲದಲ್ಲಿ ಕೃಷ್ಣ ಬಂದು ರಕ್ಷಿಸುತ್ತಾನೆ ಎಂಬ ಶರಣಾಗತ ಭಾವವಿತ್ತು. ಅವಳ ಧೈರ್ಯವೆಲ್ಲ ದೇವರ ಭಕ್ತಿ ವತ್ಸಲತನುವನ್ನು ಆಧರಿಸಿದ್ದು." ಆದರೆ ಮಹಾದೇವಿಯ ಹಾಗಲ್ಲಾ ದೇವರು ತನ್ನ ರಕ್ಷಣೆಗೆ ಬರುತ್ತಾನೆ ಎಂಬ ನಿರೀಕ್ಷೆಯನ್ನು ಇಟ್ಟುಕೊಂಡವಳಲ್ಲ. ತಾನು ಚೆನ್ನಮಲ್ಲಿಕಾರ್ಜುನನಿಗೆ ಮನಗೊಟ್ಟವಳಾದ್ದರಿಂದ ಮತ್ತೇನು ನಡೆದರೂ ಅವನಿಗೇ ಅರ್ಪಿತವಾದದ್ದು ಎಂಬಂತಹ ದೃಢನಂಬಿಕೆ ಅಥವಾ ನಿರ್ಲಕ್ಷ್ಯ ಅವಳಲ್ಲಿತ್ತು.

ಅಕ್ಕ ಮತ್ತು ಚನ್ನ ಮಲ್ಲಿಕಾರ್ಜುನನಿಬ್ಬರು ಒಲದಂತಹ ಪ್ರೀತಿ-ಭಕ್ತಿಯನ್ನು ಒಬ್ಬರಲೊಬ್ಬನಾಗಿ ಅನುರಕ್ತಭಾವವಾಗಿರವ ಒಂದು ವಚನವನ್ನು ನೋಡಬಹುದು.

'ನಾನು ನಿನಗೊಲಿದೆ, ನೀನು ನನಗೊಲಿದೆ.
ನಿನೆನ್ನನಗಲದಿಷ್ಟೆ, ನಾನಿನ್ನನಗಲದಿಷ್ಟೆನಯ್ಯ
ನಿನಗೆ ಎನಗೆ ಬೇರೊಂದು ಠಾವುಂಟೆ?
ನೀನು ಕರುಣಿಯೆಂಬುದು ಬಲ್ಲೆನುದೇವಾ' [೨]

ಇಷ್ಟಲಿಂಗವನ್ನು ಕರಸ್ಥಲದಲ್ಲಿರಿಸಿಕೊಂಡು ಪೂಜಾ ಭಕ್ತಿಯಲ್ಲಿ ಮನಸ್ಸಿನ ಭಾವನೆಗಳನ್ನು ಪ್ರಕಟಮಾಡಿದ್ದಾಳೆ. ಇದರಿಂದ ಭಾವನೆಗಳು ವ್ಯಕ್ತವಾಗಿ ಮನಸ್ಸು ಹಗುರವಾಗುವುದು. ನಾನು ನಿನ್ನನ್ನು ಪ್ರೀತಿಸಿದ್ದೇನೆ. ನೀನು ನನ್ನನ್ನು ಪ್ರೀತಿಸಿರುವೆ. ನೀನು ಯಾವಾಗಲೂ ನನ್ನ ಕೊರಳಿನಲ್ಲಿ ಕರಸ್ಥಲದಲ್ಲಿರುವೆ, ನಾನು ಕೂಡ ಯಾವಾಗಲೂ ನಿನ್ನನ್ನು ಧರಿಸಿರುವ ನಿರ್ಧಾರ ಮಾಡಿದ್ದೇನೆ. ನಮ್ಮಿಬ್ಬರಿಗೂ ಬೇರೆ ಬೇರೆ ಸ್ಥಳವಿಲ್ಲ. ಇಬ್ಬರೂ ಒಂದೆ ಕಡೆ ಆಗಲದಂತೆ ಎಲ್ಲವನ್ನು ನೀನು ತಿಳಿದಿರುವನು. ಮತ್ತೆ ನಾನು ಹೇಳುವುದನೆಲ್ಲ ಇಲ್ಲವೆಂದು ಪರಮಾತ್ಮನ ಬಗೆಗೆ ಎಂತಹ ಸುಂದರವಾದ ಸುಕೋಮಲ ಭಾವಗಳನ್ನಿರಿಸಿಕೊಂಡಿದ್ದಳು ಎಂಬುದನ್ನು ಈ ವಚನದಿಂದ ವ್ಯಕ್ತವಾಗಿರುತ್ತದೆ.

ಅಕ್ಕಮಹಾದೇವಿಯಾದ ಅದಮ್ಯವಾದ ಭಕ್ತಿ ಪ್ರೇಮ ಎಂದು ಕೂಡಿರುವ ವಚನಗಳು ವಿಶೇಷವಾಗಿ ಕಂಡು ಬರುತ್ತದೆ. ಅಕ್ಕ ತನ್ನ ಮಾನದ ಅಂತರಾಳದ ಭಾವನಾತ್ಮಕ ತುಡಿತಗಳನೆಲ್ಲಾ ವಚನ ಸಾಹಿತ್ಯದ ಮೂಲಕ ಸೆರೆಹಿದಿರುವುದನ್ನು ಕಾಣಬಹುದಾಗಿದೆ. ಒಂದೊಂದು ವಚನದಲ್ಲಿ ಕಂಡು ಬರುವಂತಹ ಭಕ್ತಿ ಪ್ರೇಮಗಳು ರೋಮಾಂಚನವನ್ನುಂಟುಮಾಡುವಂತವು.

---

೧. ವಚನಧರ್ಮಸಾರ-ಎಂ.ಆರ್.ಶ್ರೀನಿವಾಸಮೂರ್ತಿ-ಪುಟ-೧೪೭ (೧೯೪೪)
೨. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೮೨-ಪುಟ-೬೦ (೧೯೬೬)

**4.2 ಸಾಮಾಜಿಕ ಸಂವೇದನೆ:**

ಹನ್ನೆರಡನೆಯ ಶತಮಾನದ ಶರಣರ ಮೂಲ ಉದ್ದೇಶವೇ ಸಮಾಜದಲ್ಲಿ ಬದಲಾವಣೆಯನ್ನು ತರುವುದೇ ಆಗಿತ್ತು. ಕಾಲಕಾಲದಿಂದಲೂ ತಳಕ್ಕೊತ್ತ ಜನಾಂಗದ ಉದ್ದಾರವೇ ಇವರ ಆದ್ಯ ಕರ್ತವ್ಯವಾಗಿತ್ತು. ಸಮಾಜದ ಏಳಿಗೆ ವಂಶಾಭಿವೃದ್ಧಿಗೆ ಕಾರಣರಾದ ಹೆಣ್ಣು ಮಕ್ಕಳನ್ನು ನಾಲ್ಕು ಗೋಡೆಗಳ ನಡುವೆ ಕೊಡಲಾರೆ. ಯಾವುದೇ ಸಂಸ್ಕಾರಗಳಿಗೂ ಅರ್ಹಳಲ್ಲ ಎಂಬ ನಾಮಫಲಕವನ್ನೇ ಅಂಟಿಸಿಕೊಂಡಿತ್ತು. ಸಮಾನತೆ, ಸ್ವತಂತ್ರಿಕೆ ಎಂಬುದು ಸಮಾಜದಲ್ಲಿ ಹೆಣ್ಣು ಬಿಡಿ, ಗಂಡಸರಲ್ಲೂ ಇರಲಿಲ್ಲ. ಇದನ್ನೆಲ್ಲಾ ಹೊಡೆದೋಡಿಸಿ ವೀರತನವನ್ನು ಮೆರೆಯುವ ವೀರಶೈವ ಎಂಬುದೊಂದು ದೊಡ್ಡ ವಂಶವೆಂದು ಹೇಳಿ ಎಲ್ಲರೂ ಒಂದೇ ಮನೆಯವರೆಂಬಂತೆ ನಡೆದುಕೊಂಡುದು ಇಲ್ಲಿ ಮೆಚ್ಚುವಂಥದ್ದು.

ಸಾಮಾನ್ಯರಿಗೆ ತಿಳಿಯದ ಸಂಸ್ಕೃತ ಭಾಷೆ ಕೇವಲ ಪಾಂಡಿತ್ಯ ಪ್ರದರ್ಶನಕ್ಕಾಗಿ ಮಾತ್ರ ಎಂದು ತಿಳಿದು ಕರ್ನಾಟಕದ ಮಾತೃಭಾಷೆ ಕನ್ನಡದಲ್ಲಿಯೇ. ವಚನಗಳನ್ನು ಎಲ್ಲರಿಗೂ ತಿಳಿಯುವಂತೆ ರಚಿಸಿ, ಎಲ್ಲರ ಮನದ ಭೀತಿ ಮತ್ತು ಕಳೆಯನ್ನು ಕಿತ್ತೊಗೆಯಲು ಪ್ರಯತ್ನಿಸಿದರು. ವೇದಾಧ್ಯಯನ ಮಾಡಿದವರೇ ಶ್ರೇಷ್ಠರು, ಪಂಡಿತರು ಅವರ ಮುಂದೆ ಇನ್ನೂಳಿದವರು ಕನಿಷ್ಠರು ಎಂಬ ಕಾಲಕ್ಕೆ ತಕ್ಕ ಉತ್ತರವನ್ನು ನಾನು ಸಾಮಾಜಿಕ ಚಿಂತನೆಯ ವಚನಗಳಲ್ಲಿ ಕಾಣಬಹುದಾಗಿದೆ.

ಮನುಷ್ಯ ಸಮಾಜದ ನಡುವಣ ಸಂಬಂಧವು ಜಟಿಲವಾದದ್ದು, ಒಬ್ಬ ವ್ಯಕ್ತಿ ಸಮಾಜದಲ್ಲಿ ನಾನಾ ನೆಲೆಗಳಲ್ಲಿ ತನ್ನ ಅನನ್ಯತೆಯನ್ನು ಗುರುತಿಸಿಕೊಳ್ಳುತ್ತಾ ವಚನಕಾರರು ವ್ಯಕ್ತಿಯನ್ನು ಒಂದು ಸಮಾಜದ ಅವಿಭಾಜ್ಯ ಅಂಗವಾಗಿ ಪರಿಭಾವಿಸಿ ಅದಕ್ಕನುಗುಣವಾದ ವ್ಯಕ್ತಿ ನೀತಿ ಸಂಹಿತೆಯನ್ನು ಸಮುದಾಯ ನೀತಿ ಸಂಹಿತೆಯನ್ನು ಮನಸ್ಸಿನಲ್ಲಿ ರೂಪಿಸಿಕೊಂಡರು. ಅವರು ವ್ಯಕ್ತಿ ಸಮಾಜಗಳ ಸಂಬಂಧವನ್ನು ಹೊಸದಾಗಿ ಪರಿಶೀಲಿಸಿದರು.

ವಚನಕಾರರು ಸಮಾಜದ ಎಲ್ಲಾ ವ್ಯಕ್ತಿಗಳನ್ನು ಮೂಲಭೂತವಾಗಿ ಸಮಾನರೆಂದು ಅಂದುಕೊಂಡರು, ಎಂದರೆ ಪ್ರಕೃತಿಯು ಸೃಷ್ಠಿಸಿರುವ ವ್ಯಕ್ತಿಗಳು ಹುಟ್ಟಿನಿಂದ ಸಮಾನರು ಎಂದು ಪಿ.ವಿ.ನಾರಾಯಣ್‌ರವರು ವ್ಯಕ್ತಪಡಿಸಿದ್ದಾರೆ. ಈ ಸಾಮಜಿಕ ಸಂವೇದನೆಯಲ್ಲಿ ಸಮಾಜದೊಳಗೆ ಹೋರಾಟದ ವೇದಶಾಸ್ತ್ರಗಳ ಬಗ್ಗೆ ಅಕ್ಕನ ನಿಲುವೇನು? ಎಂಬುದನ್ನು ನೋಡಬಹುದಾಗಿದೆ.

ಕೌಟುಂಬಿಕ ವ್ಯವಸ್ಥೆಯಲ್ಲಿ ಬಂಧಿತಳಾಗಿ ಆ ಮೌಲ್ಯಗಳಡಿ ನರಳುವುದನ್ನು ಬಿಟ್ಟು ತನ್ನ ಮನಸ್ಸಿನಂತೆ ನಡೆಯುತ್ತಾ? ಕೌಟುಂಬಿಕ ನೆಲೆಯನ್ನೇ ಪ್ರಶ್ನಿಸಿದ್ದಾಳೆ.

'ಈ ಲೋಕದ ಗಂಡನ್ನೆಲ್ಲ ಒಲೆಯೊಳಗಿಕ್ಕು'- ಎಂದು ಹೇಳುವಲ್ಲಿ ಈಕೆಗಿರುವ ಜಿಗುಪ್ಸೆ ಬದುಕಿನಲ್ಲಾಗಿರಬಹುದಾದ ಬೇಸರಗಳನ್ನು ಅರ್ಥೈಸಬಹುದು. ಅಕ್ಕನನ್ನು ಸಮಾಜ ಒಪ್ಪಿಗೊಂಡ

ರೀತಿಯನ್ನು ನೋಡಿದರೆ ಹೆಣ್ಣು ಸಾಮಾಜಿಕವಾಗಿ ಬದಲಾವಣೆಯನ್ನು ತರಬಹುದೆನಿಸುತ್ತದೆ. ಅಕ್ಕ ಸಂಸಾರ ತೆಜಿಸಿ ಸಮಾಜವೇನು ಹೇಳುತ್ತದೆಯೋ ಅದರ ವಿರುದ್ದವೇ ನಡೆದರೂ ಸಮಾಜ ಆಕೆಯನ್ನು ಸ್ವೀಕರಿಸಿದ್ದು, ಬಹುಮಟ್ಟಿಗೆ ಆಕೆ ಆಧ್ಯಾತ್ಮದ ಕಡೆಗೆ ಒಲಿದಿದ್ದಳೆಂಬುದಕ್ಕೆ ಇರಬೇಕು.

ಅಕ್ಕನ ಈ ವಚನದಲ್ಲಿ ಅಕ್ರಮ ಸಂಗಾತದ ಬಂಡಾಯವು ಕಾಯವನ್ನು ಅಮೂಲ್ಯಗೊಳಿಸುವ ಮತ್ತು ಸಮಾಜ ಬದಲಾವಣೆಗೆ ಅಣಿಗೊಳಿಸುವ ಅದ್ಭುತ ಮಾರ್ಗ.

‘ಲೋಕದ ಚೇಷ್ಠೆಗೆ ರವಿ ಬೀಜವಾದಂತೆ
ಕರಣಗಳ ಚೇಷ್ಠೆಗೆ ಮನವೇ ಬೀಜ
ಎನಗುಳ್ಳದೊಂದು ಮನ
ಆ ಮನ ನಿಮ್ಮಲ್ಲಿ ಒಡವೆರೆದ ಬಳಿಕ
ಎನಗೆ ಭಯವುಂಟೆ ಚನ್ನಮಲ್ಲಿಕಾರ್ಜುನಯ್ಯ.’ [೧]

ಇಂದ್ರಿಯಗಳ ಇರುವಿಕೆ ಮತ್ತು ಅವುಗಳ ಒಡನಾಟದ ಪ್ರಕ್ರಿಯೆ ಮನವನ್ನು ಆಧರಿಸಿರುತ್ತದೆ. ಮನ ಎಂಬ ಪ್ರಜ್ಞೆ ಸಂಪೂರ್ಣವಾಗಿ ಭೋಗದ ಜಗತ್ತಿನೊಳಗೆ ಐಕ್ಯವಾದರೆ ಅದಕ್ಕೆ ಮರುಹುಟ್ಟು ಇಲ್ಲವಾಗುತ್ತದೆ. ಮನದ ಬೀಜಕ್ಕೆ ಆಂತರಿಕ ವಿಕಾಸವನ್ನು ಪ್ರಭಾವಿಸುವ ಸಖ್ಯ ಅಗತ್ಯ. ಅಕ್ಕ ತನ್ನ ಪ್ರತಿರೋಧ ಚೇತನವಾದ ಚೆನ್ನಮಲ್ಲಿಕಾರ್ಜುನ ಎಂಬ ಮಹಾನ್ ಸೃಜನ ಶೀಲತೆಯೊಳಗೆ ತಲೀನಳಾಗುವ ಮೂಲತ ಭಯವನ್ನು ಮೀರುವುದು ಗಮನಾರ್ಹವಾಗಿದೆ. ಸೂರ್ಯ ಹೇಗೆ ಸೃಷ್ಟಿಗೆ ಬೀಜವೊ ಹಾಗೆ ಮನುಷ್ಯನ ಮತ್ತೆ ಮತ್ತೆ ಹುಟ್ಟಿಗೆ ಈ ಮನಸ್ಸು ಬೀಜವಾಗಿದೆ. ಈ ಮನಸ್ಸನ್ನು ನಾವು ನಿಯಂತ್ರಿಸಿದ್ದರೆ ನನಗೆ ಈ ಪರಿಭವವೆ ಬರುತ್ತಿರಲಿಲ್ಲ ಇದು ತಿಳಿದಿರುವ ವಿಚಾರ.

ಹೀಗೆ ಚನ್ನಮಲ್ಲಿಕಾರ್ಜುನನೆಂಬ ಆತ್ಮಸಂಗಾತಿ ಅಕ್ಕನ ಅನೇಕ ಸಮಸ್ಯೆಗಳಿಗೆ ಪರಿಹಾರವಾಗಿ ರೂಪಾಂತರಗೊಳ್ಳುವುದು ಕಂಡು ಬರುತ್ತದೆ. ಅಕ್ಕನ ಎಲ್ಲ ರೀತಿಯ ಬಂಧಗಿಳಿಗೂ ಚನ್ನಮಲ್ಲಿಕಾರ್ಜುನನೇ ಬಿಡುಗಡೆಯ ಬೆಳಕಾಗಿರುವುದು ವಿಶೇಷವಾಗಿದೆ. ‘ಹೋರಾಟಕ್ಕೆ’ ಒಂದು ಉತ್ತಮ ವಚನವಾಗಿದೆ. ಈ ಕೆಳಕಂಡ ವಚನ ಗಂಡ ಬಿಟ್ಟ ಅಥವಾ ಗಂಡನನ್ನು ಬಿಟ್ಟ ಹೆಣ್ಣಿಗೆ ಇಂದೂ ಸಮಾಜದಲ್ಲಿ ಮಾನ್ಯತೆಯಿಲ್ಲ. ಹಾಗಿರುವಾಗ ಅಂದಿನ ಸಮಾದ ಅಕ್ಕನನ್ನು ಹೇಗೆ ಕಂಡಿರಬಹುದು ಎಂದು ಊಹಿಸಿಕೊಳ್ಳಬಹುದು. ಆದರೆ ಇಂತಹ ಸಮಾಜದ ವ್ಯಾಘ್ರಗಳಿಗೆ ಅಂಜದ ಅಕ್ಕ ಲೋಕಕ್ಕೆ ಸೆಡ್ಡು ಹೊಡೆದು ಆಡುವ ಈ ಮಾತುಗಳು ಅವಳ ದಿಟ್ಟ ವ್ಯಕ್ತಿತ್ವಕ್ಕೆ ಕನ್ನಡಿಯಾಗಿದೆ.

‘ಆರೂ ಇಲ್ಲದವಳೆದು
ಆಳಿಗೊಳಲು ಬೇಡ ಕಂಡಯ್ಯ?



೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೪೬-ಪುಟ-೫೬ (೧೯೬೬)

ಏನ ಮಾಡಿದಡೆಯೂ ನಾನು ಅಂಜುವಳಲ್ಲ,
ತರಗೆಲೆಯ ಮೆಲದು ನಾನಿಹೆನು
ಸುರಗಿಯ ಮೇಲೊರಗಿ ನಾನಿಹೆನು
ಚನ್ನಮಲ್ಲಿಕಾರ್ಜುನಯ್ಯ
ಕರ ಕಡೆ ನೋಡಿದಡೆ
ಒಡಲನೂ ಪ್ರಾಣವನೂ ನಿಮಗೊಪ್ಪಿಸಿ ಶುದ್ಧಳಹೆನು.'[೧]

ಇದು ಅಕ್ಕ ಆಯ್ದುಕೊಂಡ ದುರ್ಗಮ ಹಾದಿ. ಪುರುಷ ಲೋಕದಲ್ಲಿ ಗಂಡನನ್ನು ಬಿಟ್ಟ ಹೆಣ್ಣಾದವಳು ಅಲೌಕಿಕ ಗಂಡನ ಅನ್ವೇಷಣೆಯಲ್ಲಿ ತನ್ನತನವನ್ನು ಸ್ಥಾಪಿಸಿಕೊಂಡ ಪರಿ ಅನ್ವೇಷಣೆ ಹಾಗೂ ಪ್ರಯೋಗಶೀಲತೆಯು ಇಡೀ ವಚನ ಚಳುವಳಿಯ ಸ್ವರೂಪವಾಗಿದೆ. ಅಕ್ಕ ಇದಕ್ಕೆ ಹೊರತಾಗಿಲಿಲ್ಲ. ಅಲೌಕಿಕ ಗುರುವಿನ ನಿರಂತರ ಹೋರಾಟದಲ್ಲಿ ಲೌಕಿಕದ ಕಷ್ಟಗಳನ್ನು ಜಯಿಸುತ್ತಾ ಹೋರಾಟದ ಬದುಕು ನಡೆಸಿದ ಅಕ್ಕನ ಜೀವನವೇ ಕಾವ್ಯವಾಗಿದೆ. ಈ ವಚನ ಧ್ವನಿ ಜಗತ್ತಿಗೆ ಹೇಳುತ್ತಿರವುದು ಹಾಗೂ ತಾನೂ ಅಗಲವಾಗಿ ನಂಬಿರುವ ಚೆನ್ನಮಲ್ಲಿಕಾರ್ಜುನನಿಗೆ ಹೇಳುವ ರೀತಿಯಲ್ಲಿದೆ ಯಾರು ಇಲ್ಲದವಳೆಂದು ತಿಳಿಯಬೇಡಿ ಎಂದು ಹೇಳುವಲ್ಲಿ ತನ್ನ ಸ್ವಯಂ ಶಕ್ತಿ, ಆತ್ಮಶಕ್ತಿಯಲ್ಲಿ ತೀವ್ರವಾದ ನಂಬಿಕೆಯ ಮೇಲೆಯೇ ಈ ಸಮಾದಲ್ಲಿ ಏನೇ ಕಷ್ಟ-ನಷ್ಟ ದು:ಖ ದುಮಾನುಗಳು ಬಂದರೆ ಏಕಾಂಗಿಯಾಗಿ ಎದುರಿಸಿದಳೇ ಎಂದು ಅಕ್ಕ ತನ್ನ ಒಳ ಧ್ವನಿಯನ್ನು ವ್ಯಕ್ತಪಸಿದ್ದಾಳೆ. ಈ ಹೋರಾಟದ ತೀರ್ವತೆ ಅಕ್ಕನ ಕಾವ್ಯಕ್ಕೆ ಒಂದು ರೀತಿಯ ವಿಸ್ಮಯ ನಿಗೂಢತೆಯನ್ನು ತಂದುಕೊಟ್ಟಿದೆ. ಇಲ್ಲಿ ಅಕ್ಕನ ಹೋರಾಟದ ದಿಟ್ಟತನವನ್ನು ಕಾಣಬಹುದು.

ಸಮಾಜ ಸಂವೇದನೆಗೆ ಅಕ್ಕಮಹಾದೇವಿಯು ಒಂದು ಅದ್ಭುತವಾದ ವರ್ಣಾತ್ಮಕವದ ವಚನವನ್ನು ವ್ಯಕ್ತಗೊಳಿಸುವುದನ್ನು ಕಾಣಬಹುದು

ಆಕಾಶದ ವಿಸ್ತಾರ ಚಂದ್ರನಿಗೆ ಗೊತ್ತು, ಹದ್ದುಗೇನು ತಿಳಿಯದ್ದು, ತಾವರೆ ಹೂವಿಗೆ ಕೆರೆಯ ಚೆಲುವ ಗೊತ್ತೇ ವಿನಹ ಕೆರೆಯಾಚೆನಲ್ಲಿ ಬೆಳೆಯುವ ಸತ್ತೆಕಸಕಳಿಗೇನು ತಿಳಿಯದು. ಹಾಗೆಯೇ ಸಮಾಜದಲ್ಲಿರುವ ಸಮಾಜ ಜನರಿಗೇನು ಗೊತ್ತು ಶರಣರ ಭಕ್ತ, ಆಧ್ಯಾತ್ಮಕತೆ ಎಂದು ಪ್ರಶ್ನಿಸುತ್ತಿದ್ದಾಳೆ.

'ಗಗನದ ಗುಂಪ ಚಂದ್ರಮ ಬಲುದಲ್ಲದೆ
ಮೇಲಿದ್ದಾಡುವ ಹದ್ದು ಬಲ್ಲುದೇ ಅಯ್ಯ?
ನದಿಯ ಗುಂಪ ತಾವರೆ ಬಲ್ಲುದಲ್ಲದೆ
ತಡಿಯಲ್ಲಿದ್ದ ಹೊನ್ನಾವರಿಕೆ ಬಲ್ಲುದೇ ಅಯ್ಯ?
ಪುಷ್ಪದ ಪರಿಮಳದ ತುಂಬಿ ಬಲ್ಲುದಲ್ಲದೆ
ಕಡೆಯಲಿದ್ದಾಡುವ ನೊರಜು ಬಿಲ್ಲುದೇ ಅಯ್ಯ?

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೬೮-ಪುಟ-೬೧ (೧೯೬೬)

ಚನ್ನಮಲ್ಲಿಕಾರ್ಜನಯ್ಯ
ನಿಮ್ಮ ಶರಣರ ನಿಲವ ನೀವೇ ಬಲ್ಲರಲ್ಲದೆ
ಈ ಕೋಣದ ಮೈಯ ಮೇಲಣ ಸೊಳ್ಳೆಗಳತ್ತ ಬಲ್ಲವಯ್ಯ?' ೧

ಸಾಮಾನ್ಯರಿಗೂ ಶರಣರಿಗೂ ಇರುವ ಅಂತರವನ್ನು ಸೂಚಿಸುವ ವಚನ ಇದ್ದಾಗಿದೆ. ಶರಣರ ನಿಲುವನ್ನು ಚೆನ್ನಮಲ್ಲಿಕಾರ್ಜನನ್ನಲ್ಲದೆ ಮತ್ತ್ಯಾರಿಗೂ ತಿಳಿಯಲು ಸಾಧ್ಯವಿಲ್ಲೆಂದು ಹೇಳುವಲ್ಲಿ ದಿನ ನಿತ್ಯ ತಾನು ಕಾಣುವ ಗಗನ, ಚಂದ್ರಮ, ಹದ್ದು, ನದಿ, ತಾವರೆ, ಹೊನ್ನಾವರಿಕೆ, ಪುಷ್ಪ, ದುಂಬಿ, ನೊರಜು, ಕೋಣ, ಸೊಳ್ಳೆ- ಇವುಗಳ ಭಾವವನ್ನು ತನ್ನ ಅನುಭವಕ್ಕೆ ತಂದುಕೊಂಡು ಕಾವ್ಯ ಮಯವಾಗಿ ಹೇಳಿದ್ದಾಳೆ.

ಪುಷ್ಪದ ಪರಿಮಳದ ತುಂಬಿ ಬಿಲ್ಲುದಲ್ಲದೆ ಕಡೆಯಲ್ಲಿದ್ದಾಡುವ ನೊರಜು ಬಲ್ಲುದೆ ಅಯ್ಯ ಹೂವಿನ ಪರಿಮಳವ ತುಂಬಿಯೇ ತಿಳಿಯಬೇಕು. ಸೊಳ್ಳೇಗೇನು ಗೊತ್ತು ಸತ್ಯಸತ್ಯಾತ್ತೆಯ ನಿಜಾ ಸಂಗತಿಯನ್ನ ಅಕ್ಕ ಉಪಮೆಯಗಳ ಮೂಲಕ ಲೋಕದಲ್ಲಿರುವ ದುಷ್ಟ, ಕಾಮುಕರ ನಿಚ್ಚ ಜನರನ್ನು ಇವುಗಳ ಹೋಲಿಕೆಯ ಮುಖಾಂತರ ತನ್ನ ಮನದಾಳದ ಸಂವೇದನೆಯನ್ನು ವ್ಯಕ್ತಪಡಿಸಿದ್ದಾಳೆ. ಅಕ್ಕ ಎಲ್ಲಯೂ ಔಚಿತ್ಯವನ್ನು ಮೀರಿ ಹೋಗಿಲ್ಲ ಎಂಬುದಕ್ಕೆ ಅವಳ ವಚನಗಳೇ ನಿದರ್ಶನ.

ಅಕ್ಕಮಹಾದೇವಿ ಅರಮನೆಯನ್ನು ತಂದೆ-ತಾಯಿ, ಬಂಧು-ಬಳಗವನ್ನು ತೊರೆದು ಏಕಾಂಗಿಯಾಗಿ ಉಡುತಡಿಯನ್ನು ಆ ಸಂದರ್ಭದಲ್ಲಿ ಅವಳ ಮನಸ್ಸಿನಲ್ಲಿರುವ ಅಂತರಾಳದ ಮಾತನ್ನು ವ್ಯಕ್ತಪಡಿಸುತ್ತಾಳೆ. ಅಕ್ಕನಲ್ಲಿ ಆ ಚಿಕ್ಕ ವಯಸ್ಸಿನಲ್ಲೇ ಅಷ್ಟೊಂದು ಧೈರ್ಯ, ಆತ್ಮವಿಶ್ವಾಸ ಕಂಡು ಬರುವ ಒಂದು ವಚನವನ್ನು ಗಮನಿಸಬಹುದು.

'ಹಸಿವಾದರೆ ಊರೊಳಗೆ ಭಿಕ್ಷಾನ್ನಂಗಳುಂಟು !
ತೃಷೆಯಾದರೆ ಕೆರೆ-ಬಾವಿ-ಹಳ್ಳಂಗಳುಂಟು !
ಶಯನಕ್ಕೆ ಹಾಳುದೇಗುವುಂಟು !
ಚನ್ನಮಲ್ಲಿಕಾರ್ಜುನಯ್ಯ ಆತ್ಮಸಂಗಾತಕ್ಕೆ ನೀನೆನಗುಂಟು' ೨

ಅಕ್ಕ ಮನೆಯನು ಬಿಟ್ಟು ಹೋಗುವುದು ಬೇಡವೆಂದು ಎಲ್ಲರು ಕಡೆದು ಬದುಕುವುದು ಕಷ್ಟವೆಂದು ಹೇಳಿದ ಸಂದರ್ಭದಲ್ಲಿ ಅಕ್ಕ ಅವರಿಗೆ ಕೊಟ್ಟ ಉತ್ತರ ಈ ವಚನವಾಗಿದೆ. ಪ್ರಕೃತಿಯೊಳಗೆ ಬಯಲಿನಲ್ಲಿ ತನ್ನ ಹಸಿವು-ಬಾಯಾರಿಕೆ-ನಿದ್ರೆ-ಊಟ ಎಲ್ಲಾವನ್ನು ಪಡೆದು ನನ್ನ ಸಂಗಾತಿ ಚನ್ನೆಮಲ್ಲಿಕಾರ್ಜುನನಲ್ಲಿರುವನೇ ಎನ್ನುವ ಅವಳ ದಿಟ್ಟ ದೃಢ ನಿಲುವನ್ನ ಗಮನಿಸಿ ಅಕ್ಕಮಹಾದೇವಿ ನಿಜವಾಗಿಯೂ ವೀರ ವಿರಗಿಣಿಯಾದವಳು ಎಂದು ಒಪ್ಪದಿರುವಲ್ಲಿ ಎರಡಿಲ್ಲ.

---

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೬೬-ಪುಟ-೬೬ (೧೯೬೬)
೨. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೧೯೯-ಪುಟ-೧೦೨ (೧೯೬೬)

ಒಂದು ಹೆಣ್ಣು ಸಮಾಜದಲ್ಲಿ ಭೀಕ್ಷೆ ಬೇಡಿ ಬದುಕುವಂತದ್ದು ಎಷ್ಟರಮಟ್ಟಿಗೆ, ಆ ಬದುಕು ಸಾರ್ಥಕತೆಯಾಗಬಲ್ಲದೇ ಎಂಬುದನ್ನು ಸೂಕ್ಷ್ಮವಾಗಿ ನೋಡಿದಾಗ ಅಸಾಧ್ಯವಾದರಿದದ್ದು ಏಕಾಂಗಿಯಾಗಿ ಭಿಕ್ಷೆ ಬೇಡಿ ಅಳು ದೇಗುಲಗಳಲ್ಲಿ ಮಲಗಿ ಚನ್ನಮಲ್ಲಿಕಾರ್ಜುನನ್ನು ನನ್ನ ಸಂಗತ ಮಾಡಿಕೊಳ್ಳುವೇ ಎನ್ನುವ ಅಕ್ಕನ ಅಂತಃ ಸ್ಪೂರ್ತಿ ಆತ್ಮಶಕ್ತಿಗಳಿಗೆ ಈ ವಚನ ಕನ್ನಡಿಯಾಗಿದೆ. ಚೆನ್ನಮಲ್ಲಿಕಾರ್ಜುನ ನನ್ನ ಜೊತೆ ಇರಬೇಕಾದರೆ ನಮ್ಮೆಲ್ಲರ ಅವಶ್ಯಕತೆ ನನಗಿಲ್ಲ, ಅವನೊಬ್ಬನಿದ್ದರೆ ಈ ಲೋಕದಲ್ಲಿ ಒಂದೊಂದು ಸಮಸ್ಯೆಗಳನ್ನ ಎದುರಿಸಿ (ಹೋರಾಡಿ) ಮುನಗಬಲೇ ಎಂಬುದು ಅಕ್ಕಮಹಾದೇವಿಯ ಒಳಧ್ವನಿಯಾಗಿದೆ. ಇದೇ ರೀತಿಯಲ್ಲಿ ಅಕ್ಕ ತನ್ನತಾನೇ ಆತ್ಮಸ್ಥೈರ್ಯವನ್ನು ಜ್ಞಾನವನ್ನು (ಅರಿವನ್ನು) ಹಾಗೂ ಮನಸ್ಸನ್ನು ಒಂದು ಧೃಢ ನಿಲುವಿಗೆ ತರಿವಂತಹ ಮತ್ತೊಂದು ವಚನ ನೋಡಬಹುದಾಗಿದೆ.

'ಬೆಟ್ಟದ ಮೇಲೊಂದು ಮನೆಯ ಮಾಡಿ
ಮೃಗಗಳಿ ಗಂಜಿದರಂತಯ್ಯ ?
ಸಮುದ್ರದ ತಡಿಯಲೊಂದು ಮನೆಯಮಾಡಿ
ನೊರೆತೆರೆಗಳ ಗಂಜಿದಡೆಂತಯ್ಯ ?
ಸಂತೆಯೊಳಗೊಂಡು ಮನೆಯಮಾಡಿ
ಶಬ್ದಕ್ಕೆ ನಾಚಿದಡೆದೆಂತಯ್ಯ
ಚನ್ನಮಲ್ಲಿಕಾರ್ಜುನದೇವ ಕೇಳಯ್ಯ
ಲೋಕದೊಳಗೆ ಹುಟ್ಟಿದ ಬಳಿಕ ಸುತ್ತಿ-ನಿಂದೆಗಳು ಬಂದರೆ
ಮನದಲ್ಲಿ ಕೋಪವ ತಾಳದೆ ಸಮದಾನಿಯಾಗಿರಬೇಕು.' [೧]

ಲೋಕಾತಿಕ್ರಾಂತವಾದ ವ್ಯಕ್ತಿತ್ವವುಳ್ಳ ಮಹಾದೇವಯಕ್ಕನಲ್ಲ ಲೋಕಾನುಭವ ಪ್ರಜ್ಞೆ ಅಗಾಧವಾಗಿದೆ. ಕಾಡಿಗೂ ಕಾಡುಮೃಗಗಳಿಗೂ, ಸಂತೆಗೂ-ಶಬ್ದಕ್ಕೂ, ಸಮುದ್ರಕ್ಕೂ-ನೊರೆತೆರೆಗಳಿಗೂ ಇರುವ ಅನಿನಾಭಾವ ಸಂಬಂಧದಂತೆ ಲೋಕ ಜೀವನಕ್ಕೂ ಸುತ್ತಿನಿಂದೆಗಳಿಗೂ ಬಿಡಿಸದ ನಂಟು. ಸಮಾಜದ ಅಂಗವಾಗಿ ಬದುಕುವ ವ್ಯಕ್ತಿ ಸಮಾಜದ ನಿಂದೆ-ಟೀಕೆಗಳನ್ನು ಸಹಜವಾಗಿ ಸ್ವೀಕರಿಸಬೇಕಾಗುತ್ತದೆ.

ನಮ್ಮ ಗುರಿ ಸಾಧನೆಯಲ್ಲಿ ಮುನ್ನಡೆಯಬೇಕು ಎಂಬುದನ್ನು ಅಕ್ಕಹೇಳುತ್ತಿದ್ದಾಳೆ. ಇದು ಅಕ್ಕಮಹಾದೇವಿ ಜೀವನಾನುಭನದಿಂದ ಕಂಡುಕೊಂಡ ನಿತ್ಯಸತ್ಯ ಸಂಘರ್ಷಗಳ ಬಿಸಿಯು ನೀರಿನ ಮಧ್ಯದಲ್ಲಿದ್ದೂ, ಜೀವನ ಕುಸುಮವನ್ನು ಅರಳಿಸಿಕೊಳ್ಳಬಲ್ಲ ಕಲಾತ್ಮಕ ಬದುಕಿನ ರಹಸ್ಯವೊಂದನ್ನು ಲೋಕಕ್ಕೆ ನೀಡಿದ್ದಾಳೆ ಹಾಗೂ ತನ್ನ ಮೂಲಕ ಮಾಡಿ ತೋರಿಸಿದ್ದಾಳೆ.

---

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೧೦೬-ಪುಟ-೭೮ (೧೯೬೬)

ವಾಸ್ತವ ಜೀವನದ ಸಮಸ್ಯೆಗಳನ್ನು ಎದುರಿಸಬಲ್ಲ ದಿಟ್ಟತನದ, ಅಕ್ಕ ಯೌವ್ವನದಿಂದಲೂ ಶ್ರೀಶೈಲವನ್ನು ಮುಟ್ಟುವ ತನಕವು ಅವಳ ಬದುಕು ಹೋರಾಟವೇ. ಮಾನವನಿಗೆ ಕಾಮ-ಪ್ರೇಮಗಳ ಸೂಕ್ಷ್ಮ ಸ್ಥೂಲ ಭಿನ್ನತೆಗಳನ್ನು ಬಹಿರಂಗಪಡಿಸಿದುದ್ದಕ್ಕಾಗಿ ಹಿಡಿದ ಕಾರ್ಯದಲಿ ಎದೆಗುಂದದೆ ಮೆಟ್ಟಿದ ಹಾದಿಯಲ್ಲಿ ಹಿಂತಿರುಗದೆ ಛಲವಾದಿಯಾಗಿ ಬಾಳಿದುದಕ್ಕಾಗಿ, ವಿಚಾರಸ್ವಾತಂತ್ರ್ಯದ ಮಾರ್ದರ್ಶನಕ್ಕೆ ಬೇಕಾದ ತತ್ವಜ್ಞಾನಿಯಾಗಿ, ಸಮಾಜ ಸುಧಾರಕಳಾಗಿದ್ದ ಅಕ್ಕ ಸ್ತ್ರೀಕುಲಕ್ಕೊಂದು ಹೆಮ್ಮೆಯ ಗರಿ.

ಅಕ್ಕಮಹಾದೇವಿಯ ಹೋರಾಟದ ಬದುಕಿನಲ್ಲಿ ನೋವು, ನಿಂದನೆ, ತಳಮಳ, ಯಾತನೆಗಳು ಎದುರಾದರೂ ಛಲ ದಿಟ್ಟತನದಿಂದ ಇವೆಲ್ಲಗಳನ್ನು ಎದುರಿಸಿ ಬಂದಳು ಎನ್ನುವುದಕ್ಕೆ ಅಂತರಂಗದ ಘಟನೆಗಳನ್ನು ಪರಿಚಯಿಸುವುದಕ್ಕೆ ಈ ವಚನದ ಸಾಲುಗಳನ್ನು ಗಮನಿಸಬಹುದು.

'ಕಿಚ್ಚಿಲ್ಲದ ಬೇಗೆಯಲಿ ಬೆಂದನವ್ವಾ
ಏರಿಲ್ಲದ ಘಾಯದಲ್ಲಿ ನೊಂದೆನವ್ವಾ
ಸುಖವಿಲ್ಲದೆ ಧಾವಲೆಗೊಂಡೆನವ್ವಾ' ೧

ಚನ್ನಮಲ್ಲಿಕಾರ್ಜನ ಎಂಬ ಅಕ್ಕನ ಆಂತರಿರ ಸ್ವಾತಂತ್ರ್ಯದ ರೂಪಕವು ಬಹುರೂಪಗಳನ್ನು ತಾಳುವ ಬಗೆ ವಿಶಿಷ್ಟವಾದದ್ದು. ಇಲ್ಲಿ ದೇವರ ಸ್ವರೂಪ ಪಡಿದಿರುವ ಈ ರೂಪಕ ಅಕ್ಕನಿಗೆ ಅಪರಿಮಿತ ಒತ್ತಡದ ದರ್ಶನವನ್ನು ಮೂಡಿಸಿದೆ. ಬಾರದ ಭವ ಗಳಿಗೆ ಕಾರಣವಾಗಿದೆ. ಹೆಣ್ಣಿನ ಕಾಯವನ್ನು ಹೊತ್ತು ಕಳವಳಗೊಂಡ ಈಗೆ ಅಷ್ಟಯಾತನೆ ಅನುಭವಿಸಿರುವ ಪರಿ ಈ ವಚನದಲ್ಲಿ ಪರಿಣಾಕಾರಿಯಾಗಿ ವ್ಯಕ್ತಗೊಂಡಿದೆ.

'ಇಹದೊಳಗೇ ಅನುಭವಿಸಿರುವ ಪರಿ ಈ ವಚನದಲ್ಲಿ ಪರಿಣಾಮಕಾರಿಯಾಗಿ ವ್ಯಕ್ತಗೊಂಡಿದೆ. ಇಹದೊಳಗೇ ಅನಂತ ಹುಟ್ಟಿಗೆ ಕಾರಣವಾಗಿರುವ ಚೆನ್ನಮಲ್ಲಿಕಾರ್ಜುನನ ಒಲುಮೆ ಸಂಪ್ರದಾಯದ ಸಮಾಜದ ಕೌರ್ಯವನ್ನು ಅರಿವಾಗಿಸಿದೆ.'

ಈ ಸನಾತನ ಸಿದ್ಧ ಜೀವನ ವಿಧಾನದಲ್ಲಿ ವ್ಯಕ್ತಿ ಹುಟ್ಟುತ್ತಾನೆಯೇ ಹೊರತು ವ್ಯಕ್ತಿತ್ವವಲ್ಲ. ಇಲ್ಲಿ ವ್ಯಕ್ತಿಗೆ ಒಂದೇ ಸಲ ಹುಟ್ಟು. ಒಂದೇ ಸಲ ಸಾವು ಆದರೆ ಪ್ರಜ್ಞಾ ವಿಕಾಸವೇ ಚಳುವಳಿ ಮತ್ತು ಬದುಕುಗಳೆಂದು ನಂಬಿದವರಿಗೆ ಅಸಂಖ್ಯ ಭವಗಳು ಸಾವುಗಳು ಎದುರಾಗುತ್ತವೆ. ಇದು ಹೋರಾಟದ ಹಾಗೂ ಹುಡುಕಾಟದ ವಾಸ್ತವದ ಚಿತ್ರಣವಾಗಿದೆ.

---

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೬೯-ಪುಟ-೬೩ (೧೯೬೬)

‘ರತ್ನದ ಸಂಕೋಲೆಯಾದರೆ ತೊಡರಲ್ಲವೆ?
ಮುತ್ತಿನ ಬಲೆಯಾದರೆ ಬಂಧನವಲ್ಲವೆ?
ಚಿನ್ನದ ಕತ್ತಿಯಲ್ಲಿ ತಲೆಯ ಹೊಯ್ದರೆ ಸಾಯದಿಪ್ಪರೆ?
ಲೋಕದ ಭಜನೆಯ ಭಕ್ತಿಯಲ್ಲಿ ನಿಲುಕಿದರೆ?
ಜನನಮರಣ ಬಿಡುವುದೇ ಚೆನ್ನಮಲ್ಲಿಕಾರ್ಜುನ?’ [೧]

ಈ ವಚನದಲ್ಲಿ ವ್ಯಕ್ತವಾಗುವ ಭಾವ, ಸಂಕೋಲೆ, ಬಂಧನ, ಕತ್ತಿ, ತೋರಿಕೆಯ ಭಕ್ತಿ (ಜನನ ಮರಣಗಳನ್ನು) ಇವುಗಳನ್ನ ರತ್ನ, ಮುತ್ತಿನ ಬಲೆ, ಚಿನ್ನದ ಕತ್ತಿ, ಲೋಕದ ಭಜನೆಗಳಿಂದ ಬಂಧಿತವಾದರೆ - ಜನನ ಹಾಗೂ ಮರಣಗಳಿಂದ ದೂರ ಉಳಿಯಲು ಸಾಧ್ಯವೆ, ಎಂದು ಪ್ರಶ್ನಿಸುವ ಅಕ್ಕ ತನ್ನ ಆತ್ಮ ಮಿಮರ್ಶೆಯ ಜೊತೆಗೆ ಹೊರಗಿನ ಸಾಮಾಜಿಕತೆ ವಿಫಲ ಸಖ್ಯವನ್ನು ಅನಾವರಣಗೊಳಿಸಿದ್ದಾಳೆ. ಲೋಕದ ಪೇಟೆಯ ಸೌಂದರ್ಯದ ಆರಾಧನೆಯೇ ಭಕ್ತಿಯನ್ನಾಗಿಸಿಕೊಂಡ ಬದುಕಿಗೆ ಅಂಥ ಅನನ್ಯತೆ ದೊರಕದು. ಇದು ಸಮೂಹ ವಿಕಾಸದ ಭಕ್ತಿಯಾಗದೆ, ಸಮೂಹ ನಾಶದ ಭಕ್ತಿಯಾಗಿದೆ. ಇಂಥ ಅಪಾಯಕಾರಿ ಭಜನೆಯಲ್ಲಿ ತೊಡಗಿರುವ ಲೋಕದ ಸ್ಥಿತಿ ಸಮಕಾಲೀನ ಸಂದರ್ಭದಲ್ಲಿ ಗಂಭೀರವಾದ ಹಂತ-ತಲುಪಿದೆ. ಜನನ-ಮರಣ ಸತ್ಯವನ್ನು ಅರಿಯದ ಸಮಾಜದಲ್ಲಿ ಮಾತ್ರ ಹಿಂಸೆಗಳು ಘಟಿಸುತ್ತವೆ. ಪ್ರಕೃತಿ ಸತ್ಯದ ಬದಲು, ವಿಕೃತಿಯ ಮಿಥ್ಯೆಗಳನ್ನು ಭಡಿಸುವ ಸಮಾಜವನ್ನು ಸರಳವಾದ ತರ್ಕದ ಮೂಲಕವೇ ಅಲುಗಾಡಿಸಿರುವುದು ಇಲ್ಲಿನ ವಿಶೇಷವಾಗಿದೆ.

ಸಮಾಜದ ಅನೇಕ ಸಮಸ್ಯೆಗಳಿಗೆ ವ್ಯಕ್ತಿಯ ಕಾಯ, ಮೋಹವು ಪ್ರಧಾನ ಕಾರಣವಾಗಿದೆ. ಆದ್ದರಿಂದಲೇ ಜೈನ ಅನುಭಾವಿಕತೆ ಕಾಯಕ್ಕಂಟಿದ ಭಾವನೆಗಳನ್ನು ನಿರ್ಮಾಣದ ಮೂಲಕ ಕಳೆಯಕೊಳ್ಳುವ ಕೆಲಸ ಮಾಡುತ್ತದೆ. ಅದೇ ರೀತಿ ಅಕ್ಕಮಹಾದೇವಿಯೂ ಕಾಯದ ನಿರಾಕರಣೆಯ ಮೂಲಕ ಆಕ್ರಮಣಕಾರಿ ನೆಲೆಗಳನ್ನು ಧಿಕ್ಕರಿಸುತ್ತಾಳೆ.

‘ಕಾಯಕರ್ರನೆ ಕಂದಿದರೇನಯ್ಯ
ಕಾಯ ಮಿರ್ರನೆ ಮಿಂಚಿದರೇನಯ್ಯ’ [೨]

ಇಲ್ಲಿ ಅಕ್ಕ ಕಾಯದ ಮಮಕಾರವನ್ನು ಮೀರುವುದು ವರ್ಣ ಹಾಗೂ ಜಾತಿ ವಾಸನೆಯ ವ್ಯಾಮೋಹದಲ್ಲಿ ತೊಳಲಾಡುವವರಿಗೊಂದು ಮುಕ್ತಿಯ ಮಾರ್ಗವನ್ನು ತೋರುವಂಥತ್ತಾಗಿದೆ. ಅದರಲ್ಲೂ ಭಾರತದ ಅತಿ ಕರಾಳ ಸಾಮಾಜಿಕ ರೋಗವಾದ ಜಾತಿಪದ್ಧತಿಯ ನಿರ್ಮೂಲನೆ ಕೇವಲ ಹೊರಗಿನ ಪ್ರಯತ್ನಗಳಿಂದ ಮಾತ್ರವಲ್ಲದೆ, ಒಳಗಣ ನಿರಾಕರಣೆಗಳಿಂದಲೂ ಸಾಧ್ಯವಾಗಬೇಕಾಗಿದೆ.

---

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೯೨-ಪುಟ-೭೧ (೧೯೬೬)
೨. ಅಕ್ಕಮಹಾದೇವಿ ವಚನಗಳು-ಸಾಂಸ್ಕೃತಿಕ ಮುಖಾಮುಖಿ-ಸಂ-ರಹಮತ್ ತರೀಕೆರೆ-ಪುಟ-೬೪ (೨೦೦೫)

ಸಮಾಜವನ್ನು ಉದ್ಧರಿಸುವಲ್ಲಿ ವೇದ ಶಾಸ್ತ್ರಗಳು ಎಷ್ಟರಮಟ್ಟಿಗೆ ಪಾಲುಗಾರಿಕೆಯಾಗುತ್ತವೆ, ಇಲ್ಲವೆ ಎಂಬುದನ್ನು ಹಾಗೂ ಅವುಗಳಿಂದ ಆಧ್ಯಾತ್ಮಿಕ ಬದುಕು ತಾಕಿಕ ಬದುಕನ್ನು ಕಾಣುವಂಥದ್ದು ತಿಳಿಸುವಲ್ಲಿ ಅಕ್ಕನ ಈ ವಚನವನ್ನು ನೋಡಬಹುದಾಗಿದೆ.

'ವೇದಶಾಸ್ತ್ರಾಗಮ ಪುರಾಣಂಗಳೆಂಬುವ
ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣಿ ಭೋ!
ಅವ ಕುಟ್ಟಲೇಕೆ?
ಅತ್ತಲಿತ್ತ ಹರಿವ ಮನದ ಶಿರವನರಿಯಬಲ್ಲಡೆ
ಬಚ್ಚಬರಿಯ ಬಯಲು ಚನ್ನಮಲ್ಲಿಕಾರ್ಜುನ '[೧]

ಶರಣರ ವಚನಗಳೊಂದಿಗೆ ವೇದ, ಶಾಸ್ತ್ರ, ಪುರಾಣ, ಆಗಮಗಳನ್ನು ಹೋಲಿಸಲಾಗಿದೆ. ವೇದಶಾಸ್ತ್ರ ಪುರಾಣಗಳು ಧಾನ್ಯ ಕುಟ್ಟಿದ ಮೇಲೆ ತಿರಳು, ಕಾಳು ಪಡೆದು ತೂರಿದ ಮೇಲೆ ಹಾರಿ ಹೋಗುವ. ತೌಡು ಒಟ್ಟು ಈ ವೇದಶಾಸ್ತ್ರಗಳನ್ನು ಕುಟ್ಟಿದರೆ ತೌಡು ಕುಟ್ಟಿ ಕಾಳು ಪಡೆಯಲು ಹೋದಂತೆಯೆ ಸರಿ. ವೇದಾದಿಗಳ ಬತ್ತವನ್ನು ಕುಟ್ಟಿ ಕುಟ್ಟಿ, ಕಾಳನ್ನು ಕಾಣದ ನೋವು ತಂದಿ ಬಳಲುವರಿ.

ಈ ವೇದಶಾಸ್ತ್ರ ಪುರಾಣಗಳಲ್ಲಿ ಸಿಲುಕಿ ಆದರ ಸರಿಯಾದ ದಾರಿ ಕಾಣದೆ ಅಡ್ಡದಾರಿಗಳಲ್ಲಿ ಸಿಕ್ಕಿ ಕಷ್ಟ ಪಡುವಿರಿ. ಸಿಪ್ಪೆನಾರುಗಳನ್ನು ಬಿಡಿಸುವುದರಲ್ಲಿಯೂ, ಕರಟವನ್ನೊಡೆಯುವುದರಲ್ಲಿಯೂ ಆಯಸ್ಸನ್ನು ಕಳೆದು ಬೇಸತ್ತು, ತಿರುಳನ್ನು ಕಾಣದೆ ವ್ಯಥೆಪಡುವಿರಿ. ಶರಣರ ಅನುಭವ ಜ್ಞಾನಗ್ನಿಯಲ್ಲಿ ಕಳಪೆಗಳೆಲ್ಲ ಸುಟ್ಟು ಅಪರಂಜಿ ಮಾತ್ರ ಕಂಗೊಳಿಸುತ್ತದೆ ಎಂದು ಹೇಳಿ ಮತ್ತೊಂದು ವಚನದ ಮುಖಾಂತರ ಅಕ್ಕನ ಪ್ರತಿಭಟನೆ ಹೋರಾಟವು ವೈಯಕ್ತಿಕ ನೆಲೆಯಿಂದ ಸಾಮೂಹಿಕ ನೆಲೆಗೆ ಚಾಚಿಕೊಳ್ಳುವುದನ್ನು ಕಾಣಬಹುದು. ಸ್ತ್ರೀಯರನ್ನು ಶೋಷಿಸುವ ಎಲ್ಲ ಬಗೆಯ ವಿದ್ಯಾಮಾನಗಳಿಗೆ ಕಾರಣೀಭೂತವಾಗಿರುವ ವರ್ಗಭೇದ ಮತ್ತು ಜಾತಿಭೇದಗಳ ವಿರುದ್ಧ ದಂಗೆ ಏಳುವುದು ಅವಳಿಗೆ ಅನಿವಾರ್ಯವಾಗಿತ್ತು.

'ಓದಿ ಓದಿ ವೇದ ವಾದಕ್ಕಿಕ್ಕಿತು
ಕೇಳಿ ಕೇಳಿ ಶಾಸ್ತ್ರ ಸಂದೇಹಕ್ಕಿಕ್ಕಿತ್ತು.
ಅರಿದೆ ಅರಿದೆಹೆನೆಂದು ಆಗುಮ ಅರಿಯಾಗಿ ಹೋಯಿತ್ತು
ಪೊರೈಸಿಹೆ ಪೂರೈಸಿಹೆನೆಂದು
ಪುರಾಣ ಪೂರ್ವದ ಬಟ್ಟೆಗೆ ಹೋಯಿತ್ತು
ನಾನೆತ್ತ ತಾನೆತ್ತ?
ಬೊಮ್ಮ ಬಿಟ್ಟ ಬಯಲು ಚನ್ನಮಲ್ಲಿಕಾರ್ಜುನ. '[೨]

---

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೧೦೭-ಪುಟ-೭೪ (೧೯೬೬)
೨. ಅಕ್ಕಮಹಾದೇವಿ ವಚನಗಳು-ಸಾಂಸ್ಕೃತಿಕ ಮುಖಾಮುಖಿ-ಸಂ-ರಹಮತ್ ತರೀಕೆರೆ-ಪುಟ-೧೧೬ (೨೦೦೫)

ವೇದವು ಓದಿನ ವಿದ್ವತ್ತಿನಿಂದ ಕೂಡಿದೆ. ವಾದ ಪ್ರಧಾನವಾಗಿದೆ. ಶಾಸ್ತ್ರವು ಕೇಳುವ ಸಂದೇಹ ಪ್ರಧಾನವಾದ ವಿದ್ಯೆ, ತಿಳಿಯುತ್ತೇನೆ, ತಿಳಿಯುತ್ತೆನೆಂದು ಆಗಮಗಳು ತಿಳಿಯಲಾರದೆ ಕೂತವು, ಈಗ ಮುಗಿಯುತ್ತದೆ ಎಂದು ಹೇಳಿ ಪುರಾಣ ಈ ಕಾಲಕ್ಕೇನು ಮುಗಿಯುವುದಿಲ್ಲ. ಬುದುಕಿನ ಹೊರಳು ಹಾದಿಯಲ್ಲಿರುವ ನಮ್ಮಗಳ ಇದಿರು ತೆರೆದುಕೊಂಡಿರುವ ಲೋಕ ಸಂಕೀರ್ಣ ಮತ್ತು ಆತಂಕಪೂರಿತವಾಗಿದೆ. “ಮಹಿಳೆ ಕತ್ತಲು ಗುಹೆಯಿಂದ ಅಕ್ಷರದ ಬಯಲು ಬಾಗಿಲಿಗೆ ಬಂದು ನಿಂತಿರುವುದರ ಹಿಂದೆ ಹಲವು ಸಂಘರ್ಷಗಳಿವೆ. ಅಸಂಖ್ಯಾ ನೋವು ಹಾಗೂ ಮೌನಗಳಿವೆ.” [೧] ಈ ಸಂಘರ್ಷ ನೋವು, ಮೌನಗಳಲ್ಲೆ ನಮ್ಮವರಿಗೆ ಪ್ರಾಯೋಗಿಕ ಪಠ್ಯವಾಗಬೇಕಿದೆ. ಅಕ್ಕನಂಥವರ ಬದುಕು ಸ್ತ್ರೀ ಸಮುದಾಯಕ್ಕೆ ಸ್ವಾಭಿಮಾನ, ಅರಿವುಗಳ ಸಂಕೇತವಾಗಿ ನಿಲ್ಲಬೇಕು. ಅಕ್ಕಮಹಾದೇವಿ ಸಮಾಜದಲ್ಲಿರುವ ಜನತೆಗೆ ಶಾಸ್ತ್ರ, ವೇದ, ಅರಿವು, ಪುರಾಣಗಳ ಬಗ್ಗೆ, ಹೇಳುತ್ತಿರುವುದು ಇವುಗಳ ಒಳಗೆ ಬೇರತು ಮನುಷ್ಯ ಎಲ್ಲವನ್ನು ಪಡೆಯಬಲ್ಲೇ, ತಿಳಿಯಬಲ್ಲೇ ಎಂದು ಹೇಳುವವರಿಗೆ ತನ್ನಲ್ಲಿರುವ ಅಂತರಂಗದ ಅರಿವಿನಿಂದ ತಿಳಿಹೇಳಲ್ಪಟ್ಟಿದಾಳೆ.

ಅಕ್ಕನ ಬದುಕು ಸಾಮಾನ್ಯ ಹೆಣ್ಣೋಬ್ಬಳು ತನ್ನ ಅಸ್ಥಿತ್ವಕ್ಕಾಗಿ ಸಾರಿದ ದಂಗೆಯಾಗಿ ಗ್ರಹಿಕೆ ಬರುವುದಕ್ಕಿಂತ ಹೆಚ್ಚಾಗಿ ಆಧ್ಯಾತ್ಮಿಕ ಪಠ್ಯವಾಗಿ ಬಳಕೆಯಾಗುತ್ತಿರುವುದು ವೈದಿಕ ಮನಸ್ಸುಗಳಿಗೆ ಅಕ್ಕನನ್ನು ಸಂಬಾಳಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಈ ಕಾರಣದಿಂದಲೇ ಅವು, ಒಟ್ಟು ವಚನ ಚಳುವಳಿಯನ್ನ ನವ ವೈದಿಕತೆಯೊಂದಿಗೆ ಸಮೀಕರಿಸುವ ತಂತ್ರ ಹೆಣಿಯುತ್ತವೆ. ಆದರೆ ಮಹಿಳಾ ಲೋಕ ಅತ್ಯಂತ ಎಚ್ಚರದಿಂದ ಅಕ್ಕನ ಬದುಕು ಮತ್ತು ಬರಹವನ್ನು ಸಾಕ್ಷಿ ಪ್ರಜ್ಞೆಯಾಗಿ ಕಾಯ್ದುಕೊಳ್ಳಬೇಕಾದ ಜರೂರಿ ಇದೆ. ಇಲ್ಲವಾದರೆ ಆಧುನಿಕ ಪರಿವರ್ತನೆಯ ನೆಪದಲ್ಲಿ ಸ್ತ್ರೀಯನ್ನು ಮತ್ತೇ ಮತ್ತೇ ವ್ಯಾಪಾರದ ಸರಕಾಗಿಸುವ ಅಪಾಯವಿದೆ ಎನ್ನುವ ಸಂವೇದನೆ ವ್ಯಕ್ತವಾಗುತ್ತದೆ.

ಈ ರೀತಿಯಾಗಿ ಅಕ್ಕಮಹಾದೇವಿ ಸಮಾಜದ ಹಲವಾರು ಸಂಕೋಲೆಗಳನ್ನು ಕಿತ್ತೊಗೆದು ತನ್ನ ವೈಯಕ್ತಿಕ ಹಾಗೂ ಸಮಾಜದ ಹೋರಾಟಗಳ ಮೂಲಕ ಸ್ತ್ರೀಸಮೂಹಕ್ಕೆ ಹಾಕಿರುವ ಸಂಕೋಲೆಗಳನ್ನ ಬಿಡಿಸಲು ಅಕ್ಕನ ವಚನಗಳು ಹೋರಾಟಕ್ಕೆ ಇಳಿದಿವೆ ಎಂದು ಹೇಳಿದರೆ ತಪ್ಪಗಲಾರದು.

ವೈದಿಕ ವರ್ಣಾಶ್ರಮ ವ್ಯವಸ್ಥೆ ಮತ್ತು ಪಿತೃ ಪ್ರಧಾನ ಕುಟುಂಬ ಪದ್ದತಿಗಳಿಂದಾಗಿ ಸಮಾಜದಲ್ಲಿ ಸ್ತ್ರೀಗೆ ಉಂಟಾಗಿದ್ದ ಅಸಮಾನತೆ ಷೋಷಣೆಗಳನ್ನು ಕಂಡ ಶರಣರು ಸ್ತ್ರೀ-ಪುರುಷರು ಭೇದ ರಹಿತ ಉಭಯ ಪ್ರಧಾನ ಕುಟುಂಬ ಪದ್ದತಿಯನ್ನು ಅಸ್ಥಿತ್ವಕ್ಕೆ ತರಲು ಪ್ರಯತ್ನಿಸಿದರು. ಭಾರತದಲ್ಲಿ ಬಹಳ ಹಿಂದಿನಿಂದಲೂ ವೈದಿಕ ಸಂಸ್ಕೃತಿ ಯಜಮಾನ ಸಂಸ್ಕೃತಿಯಾಗಿ ಬೆಳೆದು ಬಂದಿದೆ. (ವಿರೋಧವನ್ನು ಜೀರ್ಣಿಸಿಕೊಂಡು ತನ್ನ ವೈಯಾಗಿಸಿಕೊಳ್ಳುವ ಶಕ್ತಿ, ಪಡೆದಿರುವ ವೈಧಿಕಧರ್ಮ ಸಂಸ್ಕೃತದೊಂದಿದೆ) ಸೇರಿಕೊಂಡಿದೆ.

---

೧. ಅಕ್ಕಮಹಾದೇವಿ ವಚನಗಳು-ಸಾಂಸ್ಕೃತಿಕ ಮುಖಾಮುಖಿ-ಸಂ-ರಹಮತ್ ತರೀಕೆರೆ-ಪುಟ-೧೧೩ (೨೦೦೫)

ಕೇವಲ ಡಾಂಭೀಕ ಭಕ್ತಿ ತುಟಿಯಲ್ಲಿ ತತ್ವವ ನುಡಿಯುತ್ತ ಕಷ್ಟ ವೇಷಧಾರಿಗಳಾಗಿ ಮುಗ್ಧ, ಜನತೆಯ ಮೋಸ ಮಾಡುವ ಭ್ರಷ್ಟ ವಿರಕ್ತವರನ್ನು ಅಕ್ಕಮಹಾದೇವಿ ಕಂಡಿದ್ದಾಳೆ. ಹೊನ್ನು ಹೆಣ್ಣುಗಳನ್ನು 'ಮಾಯೆ' ಎಂದು ಜರಿಯುತಾ ವಾಸ್ತವ ಬಯಕಿಗೆ ಪಲಾಯನ ಹೇಳುವ ಡಾಂಭಿಕ ವಿರಕ್ತರು. "ಮೈಲಾರಿಯ ಮಲ್ಲಿಗೊರವಿತಿಯ ರಾಗಬಲ್ಲರೇ ವಿನ: ನಿಜವಾದ ವಿರಕ್ತಿ ಅಲ್ಲಿಲ್ಲ-ಎನ್ನುವ ಮಹಾದೇವಿಯಕ್ಕನ ವಿರಕ್ತರ ವಿಶ್ಲೇಷಣೆ" [೧] ಪರ್ಯಾಯವಾಗಿ ಅಂದಿನ ಸಮಾಜದ ಕಲುಷಿತ ಚಿತ್ರಣವನ್ನೊದಗಿಸುತ್ತದೆ.

'ವಿರಕ್ತಿ ವಿರಕ್ತಿಯೆಂಬರು
ವಿರಕ್ತಿಯ ಪರಿಯೆಂತುಂಟು ಹೇಳಿರಯ್ಯ!
ಕಟ್ಟಿದ ಲಿಂಗದ ಕೈಯಲ್ಲಿ ಹಿಡಿದಿದ್ದರೆ ವಿರಕ್ತನೆ?
ಹುಟ್ಟು ಕೆತ್ತುವ ಡೊಂಬಿನಂತೆ
ಬಿಟ್ಟ ಮಂಡೆಯ ಕೇಶವನ್ನುಣ್ಣಿಸಿ' [೨]

ಎಂದು ವಂಚಕ ವಿರಕ್ತರನ್ನು ಖಂಡಿಸುವ ಮಹಾದೇವಿಯಕ್ಕ, ನಿಜವಾದ ವಿರಕ್ತಿಯ ಪರಿಯನ್ನು ವಿವರಿಸಿದ್ದಾಳೆ.

'ವಿರಕ್ತನಾ ಪರಿಯೆಂತೆಂದಡೆ
ಒಡಲ ಹುಡಿಗಟ್ಟಿ
ಮೃಡನೊಳು ಎಡೆದೆರ ಹಿಲ್ಲದಿಬಲ್ಲಡೆ ವಿರಕ್ತನಪ್ಪ!' [೩]

ಎಂದು ಕಾಮ ಕ್ರೋಧಗಳನ್ನು ಜಯಸದೇ, ಲೋಭ-ಮೋಹ-ಮದ-ಮತ್ಸರಗಳಿಗೆ ದಾಸರಾಗಿ ಕೇವಲ ಬಹಿರಂಗ ಶುಚಿತ್ವವನ್ನೇ ಆಚರಿಸುವ ಶೀಲವಂತರನ್ನು ಮಹಾದೇವಿಯಕ್ಕ ತರಾಟೆಗೆ ತೆಗೆದುಕೊಂಡಿದ್ದಾಳೆ. ಆತ್ಮ ಸಾಕ್ಷಿಯಿಲ್ಲದ ಇಂಥ ವೇಷಧಾರಿಗಳು ನಿಜವಾದ ಧರ್ಮವನ್ನು ವಿಕೃತಿಗೊಳಿಸಿ ಮರುಗುವುದನ್ನು ಕಂಡು ನೊಂದಿದ್ದಾಳೆ. ಸ್ವಾನುಭವ ಸಂಪಾದನೆಯಿಂದ ಆತ್ಮಜ್ಞಾನಿಗಳಾಗದೇ ಕರ್ಮಮಾರ್ಗದಿಂದ ಭಕ್ತರಾಗಬಯಸುವ ಅಜ್ಞಾನಿಗಳಿಗೆ ಮಹಾದೇವಿಯಕ್ಕ ಬುದ್ಧಿವಾದವನ್ನು ಹೇಳಿದ್ದಾಳೆ.

'ಹೆದರದಿರು ಮನವೇ, ಬೆದರದಿರು ಮನವೇ!
ನಿಜವನರಿತು ನಿಶ್ಚಿಂತವಾಗಿರು
ಫಲವಾದ ಮರನ ಇಡುವುದೊಂದು ಕೋಟಿ!
ಎಲರದ ಮರನ ಇಡುವರೊಬ್ಬರ ಕಾಣೆ!' [೪]

---

೧. ಅಕ್ಕಮಹಾದೇವಿ -ಡಾ.ಶಾಂತಾ ಇಮ್ರಾಪೂರ-ಪುಟ-೨೪೪ (೨೦೦೧)
೨. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೩೦೭ ಪುಟ-೧೫೨ (೧೯೬೬)
೩. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೩೦೭ ಪುಟ-೧೫೨ (೧೯೬೬)
೪. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೧೨೨ ಪುಟ-೭೮ (೧೯೬೬)

ವಿಚಾರ-ವಿಮರ್ಶೆ, ವಿಡಂಬನೆ, ನಿರ್ಧಾರ, ತೀರ್ಮಾನಗಳೆಲ್ಲವೂ ಪುರುಷನ ಸೊತ್ತಾಗಿದ್ದ ಸಮಾಜವಲ್ಲ. ಮಹಾದೇವಿಯಕ್ಕನುಪ್ರವಾಹದ ವಿರುದ್ಧ ಏಕಾಂಗಿಯಾಗಿ ಈಜಿ ಜಯಿಸಿದ ಶಕ್ತಿ ಸ್ವರೂಪಿಣಿ. ಅಂದಿನ ಸಂಪ್ರಾದಾಯಬದ್ದ ಸಮಾಜಕ್ಕೆ ಮಹಾದೇವಿಯಕ್ಕನ ವ್ಯಕ್ತಿತ್ವ ನುಂಗಲಾರದ ತುತ್ತಾಗಿರಬಹುದು. ಅಂತೆಯೇ, ಆಕೆ ನೂರಾರು ಪ್ರತಿಭಟನೆಗಳನ್ನು, ನಿಂದೆ, ಟೀಕೆಗಳನ್ನು ಎದುರಿದಳೆನ್ನುವುದರಲ್ಲಿ ಸಂಶಯವೇ ಇಲ್ಲ. ಅಂಥ ಸಂದರ್ಭ ಸನ್ನಿವೇಶಗಳಲ್ಲಿ ಮಹಾದೇವಿಯಕ್ಕ ತೋರಿದ ಪ್ರತಿಕ್ರಿಯೆಗಳು ಆಕೆಯ ಸತ್ವಪೂರ್ಣ-ಧೈರ್ಯಶಾಲಿ ವ್ಯಕ್ತಿತ್ವಕ್ಕೆ ದ್ಯೋತಕವಾಗಿದೆ.

ಹೀಗೆ ಅಕ್ಕಮಹಾದೇವಿ ಸಮಾಜದಲ್ಲಿ ಹಲವಾರು ಹೋರಾಟಗಳ ಮೂಲಕ ಅಂದರೆ ಸಂಪ್ರಾದಯ, ಮಹಿಳೆಯನ್ನ ಸಂಸಾರದ ಚೌಕಟ್ಟಿನೊಳ್ಳಗೆ ಬಂಧಿಸಿದ್ದು, ವ್ಯಯಕ್ತಿಕ ಧೈರ್ಯವನ್ನು ವ್ಯಕ್ತಪಡಿಸುವ ಚಿತ್ರಣ ಡಾಂಭಿಕ ಭಕ್ತರಿಗೆ ಉಪದೇಶಿಸುವುದು ಹಾಗೂ ಅವರಿಗೆ ಅರಿವಣ ನೀಡುವಂತಹ ಚಿತ್ರಣ ವೇದಶಾಸ್ತ್ರ ಪುರಾಣದ ಕಲ್ಪನೆಯ ಬಗ್ಗೆ ಚಿತ್ರಿಸುವುದು. ಈ ಎಲ್ಲಾ ಅಂಶಗಳನ್ನು ಸಾಮಾಜಿಕ ಸಂವೇದನೆಯಾಡಿಲ್ಲಿ ಕಾಣಬಹುದುದಾಗಿದೆ.

**4.3 ಸಾಹಿತ್ಯದಲ್ಲಿ ಸಂವೇದನೆ:**

ಸಾಹಿತ್ಯವು ಮೂಲತ: ಪರಮಾರ್ಥಸುಧೆಯಾದರೂ ಅದು ಪುರುಷಾರ್ಥಗಳ ಸಕ್ಕರೆ-ದ್ರಾಕ್ಷಿ-ಕೇಸರಿಗಳಿಂದ ಹದಗೊಂಡು ಉದರಕ್ಕೆ ಮಾತ್ರವಲ್ಲ ಅದರಕ್ಕೂ ಮಧುರವಾಗಿರುವುದು. ಅದು ಅಧರಕ್ಕೆ ಕಹಿಯಾಗುವುದು ಅರೋಚಕತೆಯ ಲಕ್ಷಣವೇ ಹೊರತು ಸುಧೆಯ ಗುಣವಲ್ಲ. ಮಾನವೋದ್ಧರಕ್ಕಾಗಿ ಉಸಿರಿದ ಮಹನೀಯರೆಲ್ಲರ ಮಾತಿನ ಧರ್ಮವೂ, ಮರ್ಮವೂ ಇದೇ. "ಆತ್ಮದ ಸಮಧಾಕುತ್ವ ವಿಷಮಿಸಿ ಜೀವನಕ್ಕೆ 'ಧರ್ಮಾಮೃತ' ದಲ್ಲಿ ಅರುಚಿಯಾದಾಗ, ಆ ಆತ್ಮದ ಇಂಪು-ಕಂಪುಗಳಿಂದ ಕಮ್ಮೈಸುವಂತೆ ಅಣಿಗೊಳಿಸಿದ್ದಾರೆ. ಶರಣ ಸುಧಾರಕವರೇಣ್ಯರು ಆಕರ್ಷವಾದ ಅರ್ಥದಲ್ಲಿ ಅವರು ಕವಿಗಳು ಸಾರ್ಥಕವಾದ ಅವರ ಕರ್ಮಕೌಶಲ್ಯವೇ ಕಾವ್ಯ ಕಾವ್ಯಮಯ ವಚನ ಅವು ಭವರೋಗ ನಿವಾರಕವು ಅಹುದು. ಆತ್ಮ ಶಕ್ತಿವರ್ಧಕವು ಅಹುದು."[೧]

ಮಿತವಾಗಿ ಉಳಿಯ, ಅಮಿತವಾಗಿ ಅದೃಶ್ಯವಾಗಿರುವ ಈ ವಚನ ಸಾಹಿತ್ಯವನ್ನು ನೆನೆದಾಗ ಆನೆಯ ಹಿಂಡು ತಪ್ಪಿಸಿಕೊಂಡು ಅವುಗಳ ಹೆಜ್ಜೆಗುರುತುಗಳು ಮಾತ್ರ ಕಣ್ಣಿಗೆ ಬದ್ದಂತೆನಿಸುವುದು-ವಚನಗ್ರಂಥಗಳು ಅಪಾರವಾದ ನಷ್ಟಕ್ಕೆ ಒಳಗಾಗಿವೆ ಎಂಬುದನ್ನು ಈ ಮಾತಿನಲ್ಲಿ ಗಮನಿಸಬಹುದು ಅಳಿದು ಉಳಿದಿರುವ ವಚನಗಳಿಂದಲೇ ವಚನ ಸಾಹಿತ್ಯದ ಅರಿವು ಕಾವ್ಯತ್ಮಕತೆ ಭಕ್ತಿ. ಸಮಾಜದ ಬಗ್ಗೆ ಕಳಕಳಿ, ಪ್ರಕೃತಿಯಲ್ಲಿ ನಿವೇದನೆ ಮಾಡಿಕೊಳ್ಳುವ ಪ್ರಸಂಗ.

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ಪುಟ-೧೧ (೧೯೬೬)

ವಚನಕಾರರಲ್ಲಿ 'ಸಾಹಿತ್ಯ' ಎಂಬ ಮಾತೇನೋ ಬರುತ್ತದೆ. ಆದರೆ ಅದು ವಾಙ್ಮಯವೆಂಬ ವಿಶೇಷಾರ್ಥದಲ್ಲಿ ಅಲಂಕಾರಿಕ, ಕವಿಗಳು ಸಹೃದಯರು ತಿಳಿದುಕೊಂಡು ಅರ್ಥದಲ್ಲಿ ಬಳಕೆಯಾಗಿಲ್ಲ. ಸಾಹಿತ್ಯ ಎಂದರೆ ಹೊಂದಾಣಿಕೆ, ಸಂಯೋಗ ಒಂದು ಮತ್ತೊಂದಕ್ಕೆ ಇರಬೇಕಾದ ಸಂಬಂಧ ಎಂಬ ವಾಚ್ಯಾರ್ಥದಲ್ಲೇ ವಚನಕಾರರಲ್ಲಿ ಬಳಕೆಯಾಗಿದೆ. (ಜಿ.ಎಸ್.ಎಸ್)

'ಸಾಹಿತ್ಯದಲ್ಲಿ ಅಕ್ಕನ ವಚನಗಳು ನಾಮದಲ್ಲಿ ಹೆಂಗುಸೆಂಬ ಹೆಸರಾದರೇನು? ಭಾವಿಸಲು ಗಂಡುರೂಪ'[೧] ಎಂದು ಸಾರಿದ ಅಕ್ಕ ತನ್ನ ಬದುಕಿನುದ್ದಕ್ಕೂ ಈ ಮಾತನ್ನು ಸಾರ್ಥಕ ಮಾಡಿಕೊಂಡು ಬಂದಿದ್ದಾಳೆ. ವೀರ ವೈರಾಗ್ಯವೇ ಮೂರ್ತಿವೆತ್ತಂತಿದ್ದ ಅಕ್ಕ ಮನೆಯನ್ನು ತೊರೆದು ಉಟ್ಟ ಉಡುಗೆಯನ್ನೇ ಕಳೆದು ಮಲ್ಲಿಕಾರ್ಜುನನನ್ನೇ ನಂಬಿದ ಕ್ರಾಂತಿಕಾರಿ ಭಕ್ತಿಯನಿಧಿ, ಸಾಹಿತ್ಯರಚನೆ ಅವಳ ಉದ್ದೇಶವಲ್ಲವಾದರೂ ತನ್ನ ಜೀವನದ ಉದ್ದೇಶವನ್ನು ಪೂರ್ತಿಗೊಳಿಸಿದ ಬಗೆಯನ್ನು ತಿಳಿಯಲು ಅವಳು ಬಳಸಿದ್ದು ಸಾಹಿತ್ಯವೆ.

ವಚನ ಸಾಹಿತ್ಯದಲ್ಲಿ ಸಂವೇದನೆಯನ್ನು ಗುರುತಿಸುವಂತದ್ದು ಮುಖ್ಯ ಸಂಗತಿಗಳಲ್ಲಿ ಒಂದು. ಆದರೆ ಇದನ್ನು ನಾವು ಮಾತಿನಲ್ಲಿ ಹೇಳಿದಷ್ಟು ಸುಲಭವಾಗಿ ಗೋಚರಿಸದು. ವಚನಕಾರರು ಸಾಹಿತ್ಯ ಎಂಬ ಮಾತನ್ನು 'ಲಿಟರೇಚರ್' ಎಂಬ ವಿಶಾಲವಾದ ಅರ್ಥದಲ್ಲಿ ಎಲ್ಲಿಯೂ ಬಳಸದಂತೆ ನನಗೆ ಕಾಣಲಿಲ್ಲ. ಹಾಗೆಯೇ ಕಾವ್ಯ.ದ ಬಗೆಗೆ ಇವರಿಗೆ ಅನಾಥರಲ್ಲದಿದ್ದರೂ ಆದರವೇನೂ ಇದ್ದ ಹಾಗೆ ಕಾಣುವುದಿಲ್ಲ. ಅನೇಕ ನೀತಿಕಾರರಿಗಿದ್ದಂತೆ, ಅನುಭಾವಿಗಳಿದ್ದಂತೆ ಕಾವ್ಯ ಕೂಡ ಒಂದು 'ಕಾವ್ಯ ಮೌಲ್ಯ' ವೆಂಬ ಭಾವನೆ ವಿಚನೆಕಾರರಿಗೂ ಇದ್ದಿರಬಹುದು. (ಜಿ.ಎಸ್.ಎಸ್) ವಚನ ಸಾಹಿತ್ಯದೊಳಗೆ ಕಾವ್ಯಾತ್ಮಕತೆ, ಪ್ರಕೃತಿ ಸಂವೇದನೆ, ಸ್ತ್ರೀಸಂವೇದನೆಯನ್ನು ಇಲ್ಲಿ ಯಾವ ರೀತಯಲ್ಲಿ ವ್ಯಕ್ತಗೊಂಡಿದೇ ಎಂಬುದನ್ನು ಗುರುತಿಸಬೇಕಾಗಿದೆ.

### 4.3.1 ಕಾವ್ಯಾತ್ಮಕ ಸಂವೇದನೆ:

ಒಂದು ಅನುಭವದ ತೀವ್ರತೆಯನ್ನು ಎಷ್ಟು ಕಾವ್ಯಾತ್ಮಕವಾಗಿ ಅಕ್ಕ ತನ್ನ ವಚನದಲ್ಲಿ ತಂದಿದ್ದಾಳೆ ಎಂದರೆ ವೈಯಕ್ತಿಕವಾಗಿ ಆದ ಅನ್ಯಾಯವನ್ನು ಪುರಷ ಸಮಾಜ ಮಾಡಿದ ಮೋಸವನ್ನು ಮೌನವಾಗಿ ಸಹಿಸದೇ ಪರೋಕ್ಷವಾಗಿ ಅಂತರಂಗದಿಂದ ಸ್ಫೋಟಗೊಂಡ ಮಾತು ಅವಳಿಗರಿವಿಲ್ಲದೆಯೇ ಕಾವ್ಯವಾಗಿದೆ. ಸ್ವಾನುಭಾವದಿಂದ ಅರಳಿದ ಅಕ್ಕನ ವಚನಗಳ ಹಿರಿಮೆಯನ್ನು ಕುರಿತು ಹೇಳಿದಷ್ಟು ಕಡಿಮೆಯೇ ಕಾವ್ಯ ಸೌಂದರ್ಯದಿಂದ ಕೂಡಿದ ಅಕ್ಕನ ವಚನಗಳನ್ನು ಓದಿದಾಗ ಅವಳ ಜೀವನದ ಮಹಾಕಾವ್ಯವನ್ನು ಓದಿದ ಅನುಭವ ನಮಗಾಗುತ್ತದೆ.

೧. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೩-ಬೆಂ.ವಿ.ವಿ.ನಿ-ಪುಟ-೧೪೭ (೧೯೭೬)

ಅಕ್ಕನದು ಮುಖ್ಯವಾಗಿ ಸರ್ವಸಮರ್ಪಣೀಯ ಭಕ್ತಿಮಾರ್ಗ, ಆದ್ದರಿಂದಲೇ ಅಕ್ಕನಮಹಾದೇವಿಯ ವಚನಗಳಲ್ಲಿ ಕಾವ್ಯದ ಸೊಗಸು ಹೆಚ್ಚು. ಸತಿಪತಿಭಾವದ ಭಕ್ತಿ ಪರವಶಕೆ ಮತ್ತು ಅನುಭವದ ಭಾವರೂಪಗಳನ್ನು ಕಾವ್ಯಮಯವಾಗಿ ಧ್ವನಿಸುವ ಭಾವಸಂಪತ್ತು ಅಪೂರ್ವವಾದದು. ಭಾವಭಾಷೆಯ ಸಹದ ಸಾಂಗತ್ಯದೊಂದಿಗೆ ಲಯಬದ್ಧವಾಗಿ ಅನುಭವವನ್ನು ಪ್ರಕಿಯಿಸುವ ಕೌಶಲ್ಯದಲ್ಲಿ ಮಹಾದೇವಿಯ್ಯನ ಕಾವ್ಯಪ್ರತಿಭೆ ಮಿಂಚಿದೆ. ಭಾವತನ್ಮಯತೆ, ಸಂವೇದನಾಶೀಲತೆ ಮತ್ತು ಭಾವಗೀತಾತ್ಮಕತೆಯ ಕಾಂತಿಯನ್ನು ಅಕ್ಕನ ವಚನಗಳು ಶ್ರೇಷ್ಠಮಟ್ಟದ ಭಾವಗೀತೆಗಳಾಗಿವೆ.

ಅಕ್ಕಮಹಾದೇವಿಯ ವಚನಗಳಲ್ಲಿ ಓದುವವರ ಮನತಟ್ಟಿ ಒಳಹೋಗುವ ಕಾವ್ಯತ್ಮಕ ಚೈತನ್ಯವಿದೆ. 'ನಾನೃಷಿ: ಕುರುತೇ ಕಾವ್ಯಂ'[೧]- ಶರಣರ ಆರ್ಷದೃಷ್ಟಿ ಅವರನ್ನು ಕವಿ ತಪಸ್ವಿಗಳನ್ನಾಗಿ ಮಾಡಿದೆ. ಅವರಲ್ಲಿ ಅಕ್ಕಮಹಾದೇವಿ ಶ್ರೇಷ್ಠಮಟ್ಟದ ಕವಿಯತ್ರಿ, ತಪಸ್ವಿನಿ, ಸಿದ್ಧಿಯನ್ನು ಪಡೆದ ಶರಣೆ. ದೇವಿವಾಣಿಯು ಜನವಾಣಿಯಾಗಲಾರದ ಸಮಯದಲ್ಲಿ ಜನ ವಾಣಿಯನ್ನೇ ದೇವವಾಣಿಯ ಸ್ಥಾನಕ್ಕೇರಿಸಿದ ಶ್ರೇಯಸ್ಸು ವೀರಶೈವ ಶರಣ-ಶರಣಿಯರದು. ಮಹಾದೇವಿಯಕ್ಕ ತನ್ನ ಇಷ್ಟದೇವರಿಗಾಗಿ ಪಡುವ ಭವಣಿ, ಅನುಭವಿಸುವ ವಿರಹನೊಂದ ನೋವು ಇವೆಲ್ಲ ಸಹಜವಾಗಿ ಅವಳ ಪ್ರತಿಭಾ ಕೌಶಲ್ಯದ ಫಲದಿಂದಾಗಿ ಸುಂದರ ವಚನಗಳ ರೂಪದಲ್ಲಿ ಸೂರೆಗೊಂಡಿವೆ.

'ಅಕ್ಕ ಕೇಳವ್ವ ಅಕ್ಕಯ್ಯ ನಾನೊಂದು ಕನಸ ಕಂಡೆ !
ಅಕ್ಕಿಯಡಕೆ ಓಲೆ ತೆಂಗಿನ ಕಾಯಕಂಡೆ !
ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವನು
ಭಿಕ್ಷಕ್ಕೆ ಮನೆಗೆ ಬಂದುವ ಕಂಡೆನವ್ವ
ಮಿಕ್ಕು ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು?
ಚನ್ನಮಲ್ಲಿಕಾರ್ಜುನಯ್ಯನ ಕಂಡು ಕಣ್ಣೆರೆದನು.'[೨]

ಈ ವಚನದಲ್ಲಿ ಅಕ್ಕ ತಾನು ಕಂಡಂತಹ ಕನಸಿನ ಬಗೆ ವರ್ಣನಾತ್ಮಕವಾಗಿ ಹೇಳುತ ಕನಸಿನಲ್ಲಿ ದರ್ಶನ, ನಿದ್ರೇಯಲ್ಲಿ ಚನ್ನಮಲ್ಲಿಕಾರ್ಜುನನ ಸಾನ್ನಿಧ್ಯ ಸುಖ ಎಚ್ಚರದಲ್ಲಿ ನಾಮಸ್ಮರಣೆಯಲ್ಲಿ ಮೈಮರೆತಿರುವ ಮಹಾದೇವಿಯಕ್ಕನ ಅಂತರಂಗದಲ್ಲಿ ಚೆನ್ನನೊಲುಮೆ ಆಳವಾಗಿದೆ. ತಾನೇ ಅವನಾಗಿ ಅವನೇ ತಾನಾಗಿದ್ದಾಳೆ. ಆತನ ಸುಖದಲ್ಲೆ ತಾನು ಸುಖಿಸಿದ್ದೆನೆ ಎನ್ನುವ ಕನಸಿನ ತನ್ನ ಆತ್ಮಿಯವಾದ ಗೆಳತಿಯರ ಜೊತೆ ತಾನು ಕಂಡಂತಹ ಅಕ್ಕಿಯಡಕೆ ಓಲೆ ತೆಂಗಿನಕಾಯಿ ಶುಭ ಸೂಚನೆಯ ವಸ್ತುಗಳನ್ನು ಕನಸಿನಲ್ಲಿ ಕಂಡಂತದ್ದು ಎಂದು ಅಕ್ಕನ ಈ ವಚನದಿಂದ ಗೋಚರಿಸುತ್ತದೆ. ಈ ವಚನವನ್ನು ಅಕ್ಕ ತನ್ನ ಅಂತರಂಗದ ಕಾವ್ಯತ್ಮಕ ಕಲೆಯಿಂದ ಸೆರೆಹಿಡಿದಿದ್ದಾಳೆಂದು ಹೇಳಬಹುದು. ಸುಂದರವಾದ ಆ ಮುದ್ದುಮುಖಕ್ಕೆ ಒಪ್ಪುವ ಹಲ್ಲುಗಳು ಚಿಕ್ಕ ಚಿಕ್ಕ ಜಡೆಗಳನ್ನು ಅದಕ್ಕೆ ಚಂದ್ರನ ಅಲಂಕಾರವನ್ನು ಹೊಂದಿರುವನು ಎಂದು ಅಕ್ಕ ತಾನು ಕಂಡ ಕನಸನ್ನು ತನ್ನ ಗೆಳತಿಯರಿಗೆ ಸುಂದರ ಕಲಾತ್ಮಕಾವಾಗಿ ಹೇಳಲು

೧. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೩-ಬೆಂ.ವಿ.ವಿ.ನಿ-ಪುಟ-೧೮೭ (೧೯೭೭)
೨. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೮೭-ಪುಟ-೭೯ (೧೯೭೭)

ಹೋರಾಡಿದ್ದಾಳೆ. ತಪಸ್ವಿ ಮನೆಗೆ ಭಿಕ್ಷಕ್ಕೆ ಬಂದುದ ಕಂಡೆ ಕನಸಿನಲ್ಲಿ, ಕಣ್ತೆರೆದು ನೋಡಿದರೆ ನನ್ನ ಬಿಟ್ಟು ಓಡುತ್ತಿರುವುದ ನೋಡಿ ಅವನನ್ನೇ ಹಿಂಬಾಳಿಸಿದೆ ಎಂದು ಹೇಳುತ್ತಿರುವ ಅಕ್ಕನ ವಚನದಲ್ಲಿ ಕಾವ್ಯ ಸೌಂದರ್ಯವನ್ನು ಕುರಿತು ಆಲೋಚಿಸುವುದಕ್ಕಿಂತ ಮೊದಲು, ಕಾವ್ಯ ಸೌಂದರ್ಯದ ಪಾರಿಭಾಷಿಕ ಅರ್ಥವನ್ನು ತಿಳಿದುಕೊಳ್ಳುವುದು ಮುಖ್ಯ. ತನಗಾದ ಅನುಭವವನ್ನು ಕನಸಿನಲ್ಲಿ ಕಂಡ ಸನ್ನಿವೇಶವನ್ನು (ದೃಶ್ಯಗಳನ್ನು) ಮಾತಿನ ಮೂಲಕ ಸೆರೆಹಿಡಿದಿರುವುದನ್ನು ಈ ವಚನದಲ್ಲಿ ಗುರುತಿಸಬುಹುದು.

‘ ಕಣ್ಣಿಗೆ ಶೃಂಗಾರ ಗುರುಹಿರಿಯರ ನೋಡುವುದು
ಕರ್ಣಕ್ಕೆ ಶೃಂಗಾರ ಪುರಾತನರ ಸಂಗೀತಗಳ ಕೇಳುವುದು
ವಚನಕ್ಕೆ ಶೃಂಗಾರ ಸತ್ಯವನ್ನಾಡುವುದು
ಸಂಭಾಷಣೆಗೆ ಶೃಂಗಾರ ಸದ್ಭಕ್ತರ ನುಡಿಗಡಣ.’ [೧]

ಈ ವಚನದಲ್ಲಿ ವ್ಯಕ್ತಗೊಳ್ಳುವ ಅಂಶ ಕಾವ್ಯ ನಿರ್ಮಾಣಕ್ಕೆ ಅಗತ್ಯವಾದ ಪರಿಕರಗಳನ್ನು ಅಕ್ಕ ಇಲ್ಲಿ ಸೂಚಿಸಿದ್ದಾಳೆ. ದೃಶ್ಯಲೋಕ, ಶ್ರವ್ಯಲೋಕ ಮತ್ತು ಶ್ರೋತ್ರಲೋಕ, ಇವುಗಳ ಅನುಭವ ಮನಸ್ಸನ್ನು ಗಾಢವಾಗಿ ತಟ್ಟಿದಾಗ ಮಾತ್ರ ವಚನರಚನೆ ಸಾಧ್ಯ ಮನಸ್ಸಿನ ಅಂತರಾಳವನ್ನು ಮುಟ್ಟಲಿಲ್ಲವೆಂದರೆ, ಕಾವ್ಯತ್ಮಕವಾಗಿ ವಚನ ರಚನೆ ಅಸಾಧ್ಯ. ಗುರುಹಿರಿಯರ ನೋಡುವುದೆಂದರೆ ಪೂರ್ವಸೂರಗಳ ಕಾವ್ಯ ಓದುವುದು. ವಾಕ್ ಸಿದ್ದಿ ಪಡೆದ ಹಿರಿಯರ ನಡವಳಿಕೆಯ ಸೂಕ್ಷ್ಮ, ನಿರೀಕ್ಷಣ, ಲೋಕಸಮೀಕ್ಷೆ ಮೊದಲಾದ ದೃಶ್ಯಲೋಕಗಳ ನೆರವು ಪಡೆಯುವುದು. ಹಿಂದನವರು ಸೃಷ್ಠಿಸಿದ ವಚನಗಳ ಗೇಯ ಸೌಂದರಯ್ಯಕ್ಕೂ, ಮಾತಿನ ಗೀತ ಲಯಕ್ಕೂ, ಸೂಕ್ಷ್ಮವಾಗಿ ಕವಿಯನ್ನು ತೆರೆದಿರಿಸುವುದು ಶ್ರವ್ಯಲೋಕದ ಸಿದ್ದತೆಯಾಗುತ್ತದೆ. ಸಂಭಾಷಣೆಗೆ ಶೃಂಗಾರ ಎಂಬ ಮಾತು ಆಡು ಮಾತಿನ ಅಸಂಖ್ಯ ಲಯಗಳಿಂದ ಬೆಂಬಲಪಡೆಯಬೇಕಾದ ಸಿದ್ದತೆಯನ್ನು ಸೂಚಿಸುತ್ತದೆ.



ಈ ಎಲ್ಲ ಸಿದ್ದತೆಗಳನ್ನು ಪಡೆದುಕೊಂಡದ ನಂತರ ಕಾವ್ಯದ ದಿಕ್ಕು ಯಾವುದಿರಬೇಕೆಂಬುದನ್ನು ಅಕ್ಕ ವಚನಕ್ಕೆ ಶೃಂಗಾರ ಸತ್ಯವನ್ನು ಹಾಡುವುದು ಎಂಬ ಮಾತಿನಿಂದ ಸೂಚಿಸಿದ್ದಾಳೆ. ನಮ್ಮ ಪಂಚೇಂದ್ರಿಯಗಳಿಗೆ ಮುಟ್ಟಬೇಕಾದ ವಿಷಯಗಳು ಸರಿಯಾಗಿ ಹರಿಯದೆ ಹೋದರೆ ಕಾವ್ಯ ರಚನೆ ಸಾಧ್ಯವಿಲ್ಲವೆಂದು, ಒಂದು ಅತ್ಯುತ್ತಮ ಕಾವ್ಯ ರಚಿಸಬೇಕಾದರೆ ನಮ್ಮಲ್ಲಿ ಆ ರಚನೆಗೆ ಬೇಕಾದಂತಹ ಮೂಲ ಸಾಮಾಗ್ರಿಗಳು ನಮ್ಮ ಮನಸ್ಸಿನಲ್ಲಿ ಸಿದ್ದವಾಗಿರಬೇಕು. ಅಂತವರಲ್ಲಿ ಲೋಕ ಮೆಚ್ಚುವಂತಹ ಕಾವ್ಯ ನಿರ್ಮಾಣ ಮಾಡುವುದಕ್ಕೆ ಸಾಧ್ಯವಾಗುತ್ತದೆ. ಕಣ್ಣಿಗೆ, ಕಿವಿಗೆ, ಮಾತಿಗೆ ಇವುಗಳಿಗೆ ಶೃಂಗಾರದ ಲೇಪವನ್ನು ಹಚ್ಚಿದಾಗಲೇ ಅಂತಹ ಕಾವ್ಯ ಓದುಗರಿಗೆ, ಕೇಳುಗರಿಗೆ ಸುಮಧುರವಾಗಿರುತ್ತದೆ ಎಂದು ಈ ವಚನದ ಒಳ ಧ್ವನಿಯಲ್ಲಿ ಆಶಯವಾಗಿದೆ.

---

೧. ಅಕ್ಕಮಹಾದೇವಿಯವರ ವಚನವಾಖ್ಯಾನ-ಡಾ.ವಿಜಯಕುಮಾರ ಮಹಾನುಭವಿಗಳು (೨೦೦೮)

'ಇಹಕೊಟ್ಟ ಗಂಡನೆ? ಪರಕೊಟ್ಟಗಂಡನೆ?
ಲೌಕಿಕಿಕೊಟ್ಟ ಗಂಡನೆ? ಪಾಠಮಾಡಿಕೊಟ್ಟ ಗಂಡನೆ?
ನನ್ನ ಗಂಡ ಚೆನ್ನಮಲ್ಲಿಕಾರ್ಜುನ ದೇವರಲ್ಲದೆ
ಮಿಕ್ಕವ ಗಂಡರೆಲ್ಲ ಮುಗಿಲ ಮರೆಯ ಬಣ್ಣದ ಬೊಂಬೆಯಂತೆ !' ೧

ಇಲ್ಲ ಅಕ್ಕಮಹಾದೇವಿ ತನ್ನ ಗಂಡ ಒಬ್ಬನೇ ಅವನು ಚನ್ನಮಲ್ಲಿಕಾರ್ಜುನನಲ್ಲದೆ ಬೇರಾರೂ ಅಲ್ಲ ಎಂಬ ದೃಢ ನೀಲುವನ್ನು ಕಾಣಬಹುದು. ಲಗ್ನ ಮಡಿಕೋ ಎಂದು ಒತ್ತಾಯ ಹಾಗಿದಂತೆ ಗೆಳತಿಯರಿಗೆ, ತಂದೆ-ತಾಯಿಗಳಿಗೆ ಉತ್ತರಿಸುವಾಗ ಮೂರು ಲೋಕಕ್ಕೂ ಒಬ್ಬನೇ ಗಂಡ. ಅವನು ಪರಮಾತ್ಮನಾದ ಚನ್ನಮಲ್ಲಿಕಾರ್ಜುನನಲ್ಲದೆ ಬೇರಾರೂ ಇಲ್ಲವೆಂದು ಅವನ ಜೊತೆ ನನಗೆ ಮದುವೆಯಾಗಿದೆ ಎಂದು ಉಳಿದ ಗಂಡರೆಲ್ಲಾ ಮರೆಯಲ್ಲಿ ಮಾಡುವ ಆಕಾರದ ಬೊಂಬೆಗಳು ಎಂದು ವರ್ಣಿಸುವ ಕಲೆಯನ್ನು ಅವಳ ವಚನದಲ್ಲಿ ಕಾಣಬುಹದು.

ಮಹಾದೇವಿಯಕ್ಕನಿಗೆ ಆಲೋಚನೆ ಲಹರಿಗಳಲ್ಲಿ ಕಲಾತ್ಮಕವಾದ ಕಾವ್ಯಗಳನ್ನು ಕೋಡವ ಕಲೆ ಇತ್ತು ಎಂಬುದು ಈ ವಚನದಿಂದ ತಿಳಿಯಬಹುದು. ಅಂದರೆ ಇಹಕೊಟ್ಟ ಗಂಡನೆ, ಭೂಲೋಕಕ್ಕೊಬ್ಬ ಗಂಡನೇ, ದೇವಲೋಕಕ್ಕೊಬ್ಬ ಗಂಡನೇ, ಸಂಸಾರ ಮಡುವುದಕ್ಕೊಬ್ಬ ಗಂಡ, ಪರಮಾತ್ಮನನ್ನು ಸಾಧಿಸುವುದಕ್ಕೊಬ್ಬ ಗಂಡನೆ? ನನಗೆ ಚನ್ನಮಲ್ಲಿಕಾರ್ಜುನ ದೇವರಲ್ಲದೆ ಉಳಿದವರು ಮೋಡದಲ್ಲಿ ಆಕಾರಗೊಂಡ ಬೊಂಬೆಗಳು. ಈ ಕ್ಷಣ ಇರುತ್ತವೆ ಇನ್ನೊಂದು ಗಳಿಗೆ ಅಳಿಸಿ ಹೋಗುತ್ತವೆ. ಅಂದರೆ ನಶ್ವರವಾದಂತವರು. ನನಗೆ ಬೇಡ ಅವರು. ಶಾಶ್ವತವಾದ, ಚಿರಂತನವಾದ ಪರಮಾತ್ಮನೆ ನನ್ನ ಗಂಡ ಎಂದು ಅಚವಾದ ಮನಸ್ಸಿನ ನಂಬಿಕೆಗಳ ಮೂಲಕ ವ್ಯಕ್ತಪಡಿಸುತ್ತಾಳೆ.

ಈ ವಚನದಲ್ಲಿ ಅಕ್ಕಮಹಾದೇವಿಯ ಕಾವ್ಯಾತ್ಮಕವಾದ ಸಂವೇದನೆಯನ್ನು ಕಾಣಬಹುದಾಗಿದೆ. ಈ ಬಣ್ಣದ ಬೊಂಬೆಗಳು ಆಕರ್ಷಿತವಾದಂತವು. ಈ ಲೌಕಿಕ ಜಗತ್ತಿನಲ್ಲಿ ಕ್ಷಣಿಕವಾದಂತವು. ಇವು ಶಾಶ್ವತವಾದಂತಹವೆಲ್ಲವೆಂದು, ಹೇಗೆಂದರೆ ಆಕಾಶದಲ್ಲಿ ಮೋಡಗಳ ಆಕಾರಗಳು ಕೂಡ ತುಂಬಾ ಘಳಿಗೆಯವರೆಗೆ ಉಳಿಯುವುದಿಲ್ಲ. ಅಂತಹವುಗಳಿಗೆ ಈ ಲೋಕದ ಗಂಡರನ್ನು ಹೋಲಿಸಿರುವ ಅಕ್ಕನ ಕಾವ್ಯತ್ಮಕ ಸಂವೇದನೆಯನ್ನು ಕಾಣಬಹುದು.

'ಅಪಾರ ಗಂಭೀರದ ಅಂಬುದಿಯಲ್ಲಿ
ತಾರಾಪಥವ ನೋಡಿ ನಡೆಯೆ
ಚೈತ್ರದಿಂದ ದ್ವೀಪಾಂತರಕ್ಕೆ ಸಕಲ ಪದಾರ್ಥವನೆಯ್ದಿಸುವುದು
ಎನ್ನ ದೇವ ಚನ್ನಮಲ್ಲಿಕಾರ್ಜುನಯ್ಯನ ಸಮೀಪ
ತುರ್ಯ ಸಂಭಾಣಿಯನರಿದಡೆ ಮುನ್ನಿನಲ್ಲಿಗೆಯ್ದಿಸುವುದು.' ೨

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೯೧-ಪುಟ-೭೦ (೧೯೬೬)
೨. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೯೨-ಪುಟ-೩೦ (೧೯೬೬)

ಈ ವಚನದಲ್ಲಿ ಮಹಾದೇವಿಯಕ್ಕನ ಎಣೆದಿರುವ ವರ್ಣನೆಯನ್ನು ಕಾಣಬಹುದು. ಸಮುದ್ರದ ಮೇಲೆ ತೇಲುವ ಹಡುಗಿಗೂ, ತಾನೂ ಪರಮಾತ್ಮನೆಂಬ ಸಮುದ್ರದಲ್ಲಿ ತೇಲುತ್ತಿರುವ ಹಡುಗು ಎಂದು ಹೋಲಿಕೆನ್ನು ಕೊಟ್ಟಿದ್ದಾಳೆ. ವಿಸ್ತಾರವು ದೊಡ್ಡದ್ದು, ಗಂಭೀರವು ಆದ ಸಮುದ್ರದಲ್ಲಿ ನಕ್ಷತ್ರ ದಾರಿಯನ್ನು ನೋಡಿ ನಡೆಯಲು ಹಡಗು ದ್ವೀಪದಿಂದ ದ್ವೀಪಕ್ಕೆ ಸಕಲ ವಸ್ತುಗಳನ್ನು ಒಯ್ದು ಮುಟ್ಟಿಸುವುದು. ಹಾಗೆಯೇ ನನ್ನ ದೇವನಾದ ಚನ್ನಮಲ್ಲಿಕಾರ್ಜುನ ದೇವನು ನಮ್ಮ ಭಕ್ತಿ ಅವನಿಗೆ ಮುಟ್ಟಿದರೆ ನಮ್ಮನ್ನು ಅವನ ಬಂದುದಲ್ಲಿ ಕರೆದುಕೊಳ್ಳುವನು. ಸಮುದ್ರ ವಿಶಾಲವಾದದು ಅದನ್ನು ಹಡಗಿನಲ್ಲಿ ದಾಟುವಾಗ ಅನೇಕ ಹಗಲು ರಾತ್ರಿಗಳನ್ನು ಕಳೆದು ಸಾಗಬೇಕು. ಇರಳಿನಲ್ಲಿ ಸಾಗುವಾಗ ನಕ್ಷತ್ರಗಳನ್ನು ಗುರುತ್ತಿಟ್ಟುಕೊಂಡು ಸಾಗಲಾಗುತ್ತದೆ. ಪಕ್ಷಿಗಳು ದೇಶದಿಂದ ದೇಶಕ್ಕೆ ಸಂಚರಿಸುವಾಗ ಇರಳಿನಲ್ಲಿ ನಕ್ಷತ್ರಗಳನ್ನು ಗುರುತಿಟ್ಟುಕೊಂಡು ಹಾರುತ್ತವೆ ಎಂದು ಪಕ್ಷಿ ವೀಕ್ಷಕರು ಇಂದು ಗುರುತಿಸಿದ್ದಾರೆ.

ಇದೆ ಸಂಗತಿಯನ್ನು ಹಡಗಿನ ಪ್ರಯಾಣದ ರಾತ್ರಿ ಸಂಚಾರ ಕಾಲಕ್ಕೆ ನಕ್ಷತ್ರಗಳನ್ನು ಗುರುತಿಸಿಕೊಂಡು ಸಾಗುತ್ತಿದ್ದುರು ಎಂದು ಇಲ್ಲಿ ಮಹಾದೇವಿಯಕ್ಕ ಹೇಳಿದ್ದಾಳೆ. ಹಡಗು ದ್ವೀಪದಿಂದ ದ್ವೀಪಕ್ಕೆ ಸರಕು ಮನುಷ್ಯರನ್ನು ಸಾಗಿಸುವ ಆಗೆ, ಪರಮಾತ್ಮನಿಗಾಗಿ ದೃಢ ಭಕ್ತಿಯಿಂತ ಏಕಾಂತದಲ್ಲಿ ಭಗವಂತನನ್ನು ನೆನೆದರೆ ಆ ಪರಮಾತ್ಮನು ನಮ್ಮನ್ನು ಬಂದಲ್ಲಿಗೆ ಕರೆದೊಯ್ಯುವನು. ಹುಟ್ಟು ಸಾವು ಒಂದು ದೊಡ್ಡ ಸಮುದ್ರ ಇದನ್ನು ದಾಟಬೇಕಾದರೆ ಪರಮಾತ್ಮನೆನ್ನುವ ಹಡುಗನ್ನು ಆಶ್ರಯಿಸಬೇಕು. ಈ ರೀತಿಯಾಗಿ ಮಹಾದೇವಯಕ್ಕ ತನ್ನ ಕಾವ್ಯತ್ಮಕ ವರ್ಣನೆಯಲ್ಲಿ ಅಂತರಾಳದ ಸಂವೇದನೆಯನ್ನು ವ್ಯಕ್ತಪಡಿಸಿದ್ದಾಳೆ.

**4.3.2 ಪ್ರಕೃತಿ ಸಂವೇದನೆ:**

ಮಹದೇವಯಕ್ಕನ ವಚನಗಳಲ್ಲಿ ಪ್ರಕೃತಿಯ ಮೂಲಕ, ಅದರ ಒಂದೊಂದು ವಸ್ತುಗಳಲ್ಲೂ ಚನ್ನಮಲ್ಲಿಕಾರ್ಜುನನ ರೂಪವನ್ನು ಭಾವವನ್ನು ಕಾಣುತ್ತಾಳೆ. ಅಕ್ಕನ ಅಂತಾರಳದ ಭಾವನೆ ತುಡಿತಗಳೆಲ್ಲವೂ ಪ್ರಕೃತಿಯ ವಸ್ತುವಿನ ಒಳಗೆ ಚೆನ್ನಮಲ್ಲಿಕಾರ್ಜುನನ ಭಕ್ತಿ ಬಾವವನ್ನು ಕಾಣಬಹುದು.

ವಚನದಲ್ಲಿರುವಂತ ಖಗ-ಮೃಗ ಗಿಡ-ಮರ, ಕಲ್ಲು-ಗುಡ್ಡ, ನದಿಗಳ ಇವುಗಳ ಪ್ರತಿಯೊಂದು ಚಲನವನದಲ್ಲಿ ಚೆನ್ನಮಲ್ಲಿಕಾರ್ಜುನನ ಭಕ್ತಿ, ವಾತ್ಸಲ್ಯ, ಪ್ರೇಮವನ್ನು ಹುಡುಕುತ್ತಾ, ಅರಸುತ್ತ, ಅಕ್ಕಮಹಾದೇವಿ ಏಕಕಾಲದಲ್ಲೇ ಸಂಸಾರವನ್ನು ರಾಜನನ್ನು ತೊರೆದು ಪ್ರಕೃತಿಯೇ ತನ್ನ ಬಂಧುಬಳಗ ತನ್ನ ಆರಾಧ್ಯ ದೈವವೆಂದು ಬಯಲಿನಲ್ಲಿಯೇ ತನ್ನ ಹಾಗೂ ಚನ್ನಮಲ್ಲಿಕಾರ್ಜುನನ ಒಡನಾಟದ ಬದುಕನ್ನು ಕಂಡುಕೊಳ್ಳುತ್ತ ಅಕ್ಕ ತನ್ನ ಬಹಿರಂಗದ ಹುಡುಕಾಟ ಮತ್ತು ಹೋರಾಟದಲ್ಲಿ ಪ್ರಕೃತಿಯನ್ನು ಆಧಮ್ಯವಾಗಿ ಆಧರಿಸಿ ತನ್ನ ಸಂವೇಧನೆಯನ್ನು ಪ್ರಕೃತಿಯಲ್ಲಿ ವ್ಯಕ್ತಗೊಳಿಸಿಕೊಳ್ಳುತ್ತಾಳೆ.

ಲೌಕಿಕ ಬದುಕನ್ನು ಬಿಟ್ಟು ಪ್ರಕೃತಿಯಲ್ಲೇ ತನ್ನ ಅಲೌಕಿಕ ಬದುಕನ್ನು ಕಂಡುಕೊಳ್ಳಲು ಹೊರಟಂತವಳು ಅಕ್ಕ. ಪ್ರಕೃತಿಯಲ್ಲಿನ ಪಕ್ಷಿಗಳನ್ನು ತನ್ನ ಸಹೋದರತ್ವದ ಬಾಂಧವ್ಯವನ್ನು ಅವಳ ಚನ್ನಮಲ್ಲಿಕಾರ್ಜುನ ಗುರುತನ್ನು ಕಂಡಿರ? ಎಂದು ಕೇಳುವ ಮೂಲಕ ತಿಳಿಯಬಹುದು. ಅಕ್ಕನ ಬದುಕೇ ರಮ್ಯ, ರೋಮಾಂಚಕಾರಿಯಾದಂತದ್ದು, "ಆಳಿ ಸಂಕುಳವೇ ಮಾಮರವೇ, ಬೆಳದಿಂಗಳೇ, ಕೋಗಿಲೆಯೇ, ನಿಮ್ಮೆಲ್ಲರನ್ನು ಒಂದು ಬೇಡವೆನು ! ಎನ್ನೊಡೆಯ ಚನ್ನಮಲ್ಲಿಕಾರ್ಜುನ ದೇವರ ಕಂಡಿರೆ "[೧] ನೀವು ನನಗೆ ತೋರಿಸಿ ಎಂದು ಮುಗ್ಧ ಭಾವದಿಂದ ಹಾಗೂ ಸ್ನೇಹದಿಂದ ದೈನ್ಯದಿಂದ ಪ್ರಕೃತಿಯೊಳಗೆ ಕಂಡುಬರುವ ಮಾಮರ ಚಂದಿರ ಕೋಗಿಲೆ ಇವುಗಳ ಮೂಲಕ ಚನ್ನಮಲ್ಲಿಕಾರ್ಜುನನ್ನು ಮೇಲಿರವ ಪ್ರೀತಿಯನ್ನು ವ್ಯಕ್ತಗೊಳಿಸುತ್ತಿದ್ದಾಳೆ. ಪ್ರಾಣಿ - ಪಕ್ಷಿಗಳನೆಲ್ಲಾ ಚೆನ್ನಮಲ್ಲಿಕಾರ್ಜನಯ್ಯನನ್ನು ತೋರಿಸುವಂತ ಪ್ರಾರ್ಥಿಸುತ್ತಾಳೆ.

ಈ ಮೇಲ್ಕಂಡ ವಿಷಯದಲ್ಲಿ ಪ್ರಕೃತಿಯೊಳಗೆ ವಿವಿಧ ಬಾವನಾತ್ಮಕ ಕೋರಿಕೆಗಳನ್ನು ನೋಡಿದಾಗ ಅಕ್ಕಮಹಾದೇವಿಯ ಪ್ರಕೃತಿ ಸಂವೇದನೆ ಏನು ಎಂದು ತಿಳಿಯುತ್ತದೆ.

'ಚಿಲಿಮಿಲಿ ಎಂದೋದುವ ಗಿಳಿಗಳಿರಾ !
ಸರವರದೊಳಗಾಡುವ ಹಂಸೆಗಳಿರಾ !
ನೀವು ಕಾಣಿರೇ ? ನೀವು ಕಾಣಿರೇ ?
ಸರವೆತ್ತಿ ಪಾಡುವ ಕೋಗಿಲೆಗಳಿರಾ!'
ನೀವು ಕಾಣಿರೇ ? ನೀವು ಕಾಣಿರೇ ?
ಎರಗಿ ಬಂದಾಡುವ ತುಂಬಿಗಳಿರಾ !
ನೀವು ಕಾಣಿರೇ ? ನೀವು ಕಾಣಿರೇ ?
ಗಿರಗಹ್ವರದೊಳಗಾಡುವ ನವಿಲುಗಳಿರಾ!
ನೀವು ಕಾಣಿರೇ ? ನೀವು ಕಾಣಿರೇ ?
ಚನ್ನಮಲ್ಲಿಕಾರ್ಜುನ ದೇವನೆಲ್ಲದ್ದಾನೆಂಬುದು ಬಲ್ಲಡೆ
ನೀವು ಹೇಳಿರೇ.'[೨]

ಈ ವಚನವನ್ನು ನೋಡುತ್ತಿದಂತೇಯೆ ಇದು ಪ್ರಕೃತಿಗೆ ಸಂಬಂಧಿಸಿದ ವಿಷಯವೆಂದು ಮನದಟ್ಟಾಗುತ್ತದೆ. ಅಕ್ಕಮಹಾದೇವಿ ಗಿಳಿ, ಹಂಸ, ಕೋಗಿಲೆ. ನವಿಲುಗಗಳಿಗೆ ಪ್ರಶ್ನೆಯನ್ನು ಮಾಡುತ್ತಿದ್ದಾಳೆ. ಲೌಕಿಕ ಬದಕನ್ನು ಎಲ್ಲಾ ಸಂಬಂಧಗಳನ್ನು ತೊರೆದು ಏಕಾಂಗಿಯಾಗಿ ಚನ್ನಮಲ್ಲಿಕಾರ್ಜುನನ್ನು ಸ್ಮರಿಸುತ್ತ ಬಂದಂತಹ ಸನ್ನವೇಶದಲ್ಲಿ ವನದಲ್ಲಿ ಈ ಪಕ್ಷಿಗಳನ್ನು ಕಂಡು ಮುಂದೆ ಮುಂದೆ ಸಾಗುತ್ತಾ, ನೀವೇನಾದರೂ ನನ್ನ ಚನ್ನಮಲ್ಲಿಕಾರ್ಜುನನ್ನ ಕಂಡಿರಾ, ಕಂಡರೆ ನನಗೆ ತಿಳಿಸಿ ಎಂದು ಪ್ರಕೃತಿಯೊಳಗೆ ತಮ್ಮದೇ ಆದ ಜೀವನವನ್ನು ಸಾಗಿಸುತ್ತಿರುವ ಹಂಸ, ಗಿಳಿ, ಕೋಗಿಲೆ ಹಾಗೂ



೧. ಅಕ್ಕಮಹಾದೇವಿ -ಡಾ.ಶಾಂತಾ ಇಮ್ರಾಪೂರ-ಪುಟ-೨೬೬ (೨೦೦೧)
೨. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೬೬-ಪುಟ-೬೪ (೧೯೬೬)

ನವಿಲುಗಳಲ್ಲಿ ಚೆನ್ನಮಲ್ಲಿಕಾರ್ಜುನನ ಆತ್ಮೀಯತೆಯನ್ನು ಕಾಣುತ್ತಾಳೆಂದು ಹೇಳಬಹುದು. 'ನೆಲದ ಮರೆಯ ನಿಧಾದಂತೆ ಭಾವದ ಮರೆಯ ಬ್ರಹ್ಮವಾಗಿರುವ ಪರಮಾತ್ಮ ಸರ್ವಾಂತರ್ಯಾಮಿ ಎನ್ನುವ ಶಾಶ್ವತ ಸತ್ಯ'[೧] ವನ್ನು ಮಹಾದೇವಿಯಕ್ಕ ಮನಗಂಡಿದ್ದಾಳೆ. ಇವುಗಳು ಸಂತೋಷದಿಂದ ಗೀತೆಗಳನ್ನು ಹಾಡುತ್ತ, ಕುಣಿಯುತ್ತ, ಆಡುತ್ತ ನಲಿಯುತ್ತ ಸಂಭ್ರಮಗೊಳ್ಳುತ್ತ ಆ ಭಗವಂತನನ್ನು ಕಾಣಿತ್ತಿವೆಯಲ್ಲ. ಅರಣ್ಯದ ಪಕ್ಷಿಗಳಿಗೆಲ್ಲ ಗೋಚರನಾಗಿ ನನಗೆ ಮಾತ್ರ ಅಗೋಚರನಾಗಿ ಉಳಿದಿರುವುದು ನ್ಯಾಯವೇ ಚೆನ್ನಮಲ್ಲಿಕಾರ್ಜುನ? ಎಂದು ಪ್ರಶ್ನೆಗಳ ಕೇಳುತ್ತ ತನ್ನ ಸಂವೇದನೆಯನ್ನ ಪ್ರಕೃತಿಯೊಳಗೆ ಆನಂದಿಸುತ್ತಿರುವ ಈ ಪಕ್ಷಿಗಳಲ್ಲಿ ಅವನನ್ನು ಕಾಣುವ ಜೀವನ ಪ್ರೀತಿಯನ್ನು ಅಕ್ಕನಲ್ಲಿ ಮಾಡಿಸಿವೇ.

'ವನವೆಲ್ಲ ನೀವೆ
ವನದೊಳಗಣ ದೇವತರುವೆಲ್ಲ ನೀವೆ
ತರುವಿನೊಳಗಾಡುವ ಖಗ ಮೃಗವೆಲ್ಲ ನೀವೆ
ಚನ್ನಮಲ್ಲಿಕಾರ್ಜುನ ಸರ್ವಭರಿತನಾಗಿ
ಎನಗೇಕೆ ಮುಖದೋರೆ?'[೨]

ಪ್ರಕೃತಿಯಲ್ಲಿ ಪರಮಾತ್ಮನನ್ನು ದರ್ಶಿಸುವ ಅಕ್ಕಮಹಾದೇವಿಗೆ ವನದಲ್ಲೆಲ್ಲ ನೀನೆ. ಕಾಡಿನ ದೇವಮರವೆಲುಪ್ಪ ನೀನೆ. ಮರದೊಳಗೆ ಆಡ ಪಕ್ಷಿ, ಮೃಗಗಳೆಲ್ಲವೂ ನೀನೆ ಎಂದು ಅಕ್ಕ ಹೇಳುವ ಕಾವ್ಯದ ವರ್ಣನೆಯನ್ನ ಗಮನಿಸಬಹುದು. ಇಡೀ ವನವೆಲ್ಲ ಚನ್ನಮಲ್ಲಿಕಾರ್ಜುನದೇವರು. ವನದ ಮರದೊಳಗೆಲ್ಲ ಚನ್ನಮಲ್ಲಿಕಾರ್ಜುನನ್ನು ಕಾಣವಂತಹದು. ಈ ವನದಲ್ಲಿ ಸುಳಿದಾಡುವ ಪ್ರಾಣಿ ಜಗತ್ತೆಲ್ಲವೂ ನೀನೆ. ನೀನು ಎಲ್ಲೆಲ್ಲೂ ಸರ್ವಭರಿತನಾಗಿರುವೆ. ವನ, ಮರ, ಪಕ್ಷಿ, ಪ್ರಾಣಿಗಳೆಲ್ಲವೂ ದಿವ್ಯವಾಗಿ ಚನ್ನಮಲ್ಲಿಕಾರ್ಜುನನ ಕುರುಹಾಗಿಯೂ ತನ್ನ ಛಾಪು ತೋರುವ ನೀನು, ನೀನು ಸರ್ವತೋಮುಖವಾಗಿ ನಿನ್ನ ದರ್ಶನ ನನಗೆ ನೀಡು ಎಂದು ಬೇಡಿಕೊಳ್ಳುತ್ತಿದ್ದಾಳೆ.

ಪ್ರಕೃತಿಯಲ್ಲಿರುವ ಸುಪರಿಚಿತ ವಸ್ತುವಿಷಯಗಳಲ್ಲಿಯೇ ಅದ್ಭುತ ಅರ್ಥ ಪರಂಪರೆಯನ್ನು ಹುಟ್ಟಿಸಬಲ್ಲ ಕಲೆಗಾರಿಕೆ ಅಕ್ಕನಿಗಿದೆ. 'ತೆರಣಿಯಹುಳು, ಬಂಧನಕ್ಕೆ ಬಂದ ಗಿಳಿ-ಈಜಿ ಪಡೆದ ಕುಂಜರ ಸರ್ಪನ ಬಾಯಿಕಪ್ಪೆ, ಹಲ್ಲು ಕಳೆದ ಹಾವು ಜಲವಂತ ತಟಾಕೆ, ಕದಳಿ ತೆಕ್ಕೆ, ಸಡಿಲಿದ ಜಕ್ಕವಕ್ಕ ಮುಂತಾ ಪ್ರತಿಮೆಗಳೊಂದಿಗೆ ಅಮೂರ್ತವಾದ ಸ್ವಾನುಭಾವವನ್ನು ಮೂರ್ತಗೊಳಿಸುಲ್ಲಿ'[೩] ಅಕ್ಕನ ಸಾಧನೆ ಪ್ರಶಂಸನೀಯವಾಗಿದೆ.

ತನ್ನ ಕಾಯ, ಮನಸ್ಸು, ಭಾವಗಳಲ್ಲೆಲ್ಲ ಚನ್ನಮಲ್ಲಿಕಾರ್ಜುನನೇ ನೆಲೆಸಿರುವುದರಿಂದ ತಾನು ಸಂಪೂರ್ಣವಾಗಿ ಆತನಲ್ಲಿಯೇ ಲೀನವಾಗಿ ಬಿಟ್ಟಿರುವುದರಿಂದ ಆತನನ್ನು ಹೊರತುಪಡಿಸಿ ತನ್ನ ಲಿಂಗ-ಮನ-ಭಾವಗಳು ಇತರ ಲೌಕಿಕ ವಸ್ತು ವಿಷಯಗಳತ್ತ ಹರಿಯಲಾರವು ಎನ್ನುವುದನ್ನು ವಿವರಿಸಲು

೧. ಅಕ್ಕಮಹಾದೇವಿ -ಡಾ.ಶಾಂತಾ ಇಮ್ರಾಪೂರ-ಪುಟ-೨೬೩ (೨೦೦೧)
೨. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೬೫-ಪುಟ-೬೫ (೧೯೬೬)
೩. ಅಕ್ಕಮಹಾದೇವಿ -ಡಾ.ಶಾಂತಾ ಇಮ್ರಾಪೂರ-ಪುಟ-೪೨೦ (೨೦೦೧)

ಅಕ್ಕಮಹಾದೇವಿ ಬಳಸಿಕೊಂಡ ನವಿಲು-ಹಂಸೆ, ಕೋಗಿಲೆ-ಭ್ರಮರಗಳ ರೂಪಕಗಳು ಆಕೆಯ ತೀರ ವೈಯಕ್ತಿಕ ಅನಿಸಿಕೆ ಹಾಗೂ ಆಧ್ಯಾತ್ಮ ವಿಚಾರಗಳ ಧ್ವನಿ ಪೂರ್ಣವಾಗಿ ಸೆರೆಹಿಡಿದಿವೆ.

'ಗಿರಿಯಲಲ್ಲದೇ
ಹುಲುಮೊರಡಿಯಲಾಡುವುದೇ ನವಿಲು
ಕೊಳನನಲ್ಲದೆ ಕಿರುವಳ್ಳಿ ಕೆಳಸುವುದೇ ಹಂಸೆ?
ಮಾಮರ ತಳಿತಲ್ಲದೇ ಸ್ವರಗೈಯುವುದೇ ಕೋಗಿಲೆ?
ಪರಿಮಳವಿಲ್ಲದ ಪುಷ್ಪಕ್ಕೆಳಸುವುದೇ ಭ್ರಮರ?
ಎನ್ನ ದೇವ ಚನ್ನಮಲ್ಲಿಕಾರ್ಜುನಗಲ್ಲದೆ
ಅನ್ಯಕೆಳಸುವುದೇ ಎನ್ನ ಮನ ಕೇಳಿಕೆ ಕೆಳದಿಯರಿರಾ?' [೧]

ಅಕ್ಕ ಇಲ್ಲಿ ನಾಲ್ಕು ರೂಪಕಗಳನ್ನು ಬಳಸಿಕೊಂಡಿರುವುದು ಮನೋಜ್ಞವಾಗಿವೆ. ಪರಮಾತ್ಮನೆ ಬೇಕು ಎನ್ನುವುದಕ್ಕೆ ಅವಳು ಬಳಸಿಕೊಂಡಿರುವ ಚಿತ್ತಗಳು ತುಂಬಾ ಪರಣಾಮಕಾರಿಯಾಗಿದೆ. ನವಿಲು ಬೆಟ್ಟಗುಡ್ಡಕಾಡು ಪರ್ವತ ಪ್ರದೇಶಗಳಲ್ಲಿ ಗರಿ ಬಿಚ್ಚಿ ನರ್ತಿಸುತ್ತದೆ. ಅದು ಆನಂದಸಲು ಗರಿಬಿಚ್ಚಿ ಕುಣಿಯಲು ಪರ್ವತ ಪ್ರಾಂತ್ಯಗಳೇ ಬೇಕು. ಇಲ್ಲದ್ದಲ್ಲಿ ಅದು ನರ್ತಿಸದು. ಹಂಸವೂ ಅಷ್ಟೆ ಎಲ್ಲಿ ತಿಳಿಗೊಳ ಇದೆ ಅಲ್ಲಿ ಹಾಡುತ್ತದೆ. ಕೇಸರಿದ್ದಲಿ ಆದು ಹಾಡುವುದಿಲ್ಲ. ತಿಳಿಗೊಳ ತಾವರೆಯಿದ್ದಲ್ಲಿ ಹಾಡುತ್ತದೆ. ಹಾಗಯೇ ಪೂರ್ಣತೆ ಇರುವ ಪರಮಾತ್ಮನಿದ್ದಲ್ಲಿ ಮಾತ್ರ ನಾನೀರುವಳು, ಅವನೇ ನನ್ನ ಜಗತ್ತು, ಅವನಿಲ್ಲದ ಜಾಗದಲ್ಲಿ ನಾನು ಇರಲಾರೆ ಎಂದು ಕೋಗಿಲೆ ಎಲ್ಲಿ ಬಂದು ಕೂಡುತ್ತದೆಡೆ ತಳಿತ ಮಾವಿನ ಚಿಗುರಿದ್ದಲ್ಲಿ ಬಂದು ಕೊಡುತ್ತದೆ. ಎಲ್ಲಿ ಪರಿಮಳ ಸುಗಂಧವಿದೇಯೋ ಅಲ್ಲಿ ಜೇನುದುಂಬಿ ಹೋಗುತ್ತದೆ. ಹಾಗೆಯೇ ನಾನು ಪರಮಾತ್ಮನನ್ನೇ ಪತಿಯನ್ನಾಗಿ ಪಡೆಯುವವಳು ಚನ್ನಮಲ್ಲಿಕಾರ್ಜನನ್ನಿಲ್ಲದೆ ಅನ್ಯ ವಿಷಯಗಳು ಬೇಡ ಹಾಗೂ ಏನನ್ನು ಕೇಳಿದಿರಿ ಎಂದು ತನ್ನ ಮನದಲ್ಲಿರುವ ದೃಢ ಭಕ್ತಿ ಚಲವನ್ನು ವ್ಯಕ್ತಪಡಿಸುತ್ತಿದ್ದಾಳೆ. ಈ ಎಲ್ಲಾ ಜೀವಿಗಳು ಜಗತ್ತಿಗೆ ತಮ್ಮನ್ನ ತೋರಿಸಿಕೊಂಡಿರುವಂತೆ ಅಕ್ಕ ನಾನು ಚನ್ನಮಲ್ಲಿಕಾರ್ಜುನನಿಲ್ಲದೆ ಸಂತೋಷದಿಂದ ಬದುಕಲು ಸಾಧ್ಯವಿಲ್ಲ ಅವನಿಲ್ಲದ ಬದುಕನ್ನು ಊಹಿಸಲು ಸಾಧ್ಯವಿಲ್ಲ ಎಂಬು ವಿಚಾರನ್ನು ಈ ವಚನ ವ್ಯಕ್ತಗೊಳಿಸುತ್ತದೆ.

ಅಕ್ಕಮಹಾದೇವಿಯ ಸಂವೇದನೆಯನ್ನು ಪ್ರಕೃತಿಯ ಒಂದೊಂದು ಭಾಗದಲ್ಲಿಯೂ, ಅಂದರೆ ವಸ್ತುವಿನಲ್ಲಿಯೂ ಚನ್ನಮಲ್ಲಿಕಾರ್ಜುನನ ರೂಪದಲ್ಲಿ ಅಡಕಗೊಂಡಿರುವುದನ್ನು ಗುರುತಿಸಬಹುದು. ಅವಳ ಏಕಾಂಗಿತನದಲ್ಲಿ ಪ್ರಕೃತಿಯೇ ಮನೆ, ಸಂಸಾರ ಹಾಗೂ ತನ್ನ ಬದುಕಿನ ಬವಣೆಗಳನ್ನೆಲ್ಲ ಪ್ರಕೃತಿಗಳಿಗೆ ಚನ್ನಮಲ್ಲಿಕಾರ್ಜುನನ ಮುಖಾಂತರ ಕಾಣಲು ಇಚ್ಚಿಸುತ್ತಾಳೆ.

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೩೧೫-ಪುಟ-೧೫೮ (೧೯೬೬)

ಈ ವಚನದಲ್ಲಿ ವ್ಯಕ್ತವಾಗುವ ಭಾವವೆಂದರೆ ಶ್ರೀಶೈಲ ಕದಳಿ ವನದ ಬಗೆಗೆ ಅಕ್ಕಮಹಾದೇವಿಗೆ ಎಷ್ಟೋಂದು ಉನ್ನತ ಭಾವನೆಗಳಿವೆ ಎಂದು ನೋಡಿದರೆ ಆಶ್ಚರ್ಯವಾಗುತ್ತದೆ. ಅಲ್ಲಿನ ಗಿಡ, ಮರ, ಸಸ್ಯ, ಕಲ್ಲು, ಮರಳು ಎಲ್ಲವೂ ಅವಳಿಗೆ ಫಲದಾಯಕಗಳೆ. ಕೊನೆಗೆ ಕೂಡ ಪವಿತ್ರ ಕ್ಷೇತ್ರ. ಚನ್ನಮಲ್ಲಿಕಾರ್ಜುನನಿಗೆ ಹಿರಿದಾಗಿ ಮಾರುವುದ ಅಕ್ಕಮಹಾದೇವಿ ಪರಮಾತ್ಮನಿಗೆ ಇಷ್ಟವಾದುದ್ದೆಲ್ಲವೂ ಅವನ ಸಾನ್ನಿಧ್ಯದ ತಾಣ ಎಂದು ಕರೆಸಿಕೊಂಡುದೆಲ್ಲವೂ ಪುಣ್ಯಕ್ಷೇತ್ರವಾಗಿದೆ. ಅದರ ಹಿರಿಮೆಯನ್ನು ಅಕ್ಕನಿಗೆ ಎಷ್ಟು ಕೊಂಡಾಡಿದರೂ ಕಡಿಮೆಯೇ, ಪರ್ವತದ ಕದಳಿ ವನದ ಕಾಡೆಲ್ಲವೂ, ಕಾಡಿನ ಮರಗಳೆಲ್ಲವೂ, ಕಲ್ಪವೃಕ್ಷಗಳೆಲ್ಲವೂ, ಅಲ್ಲಿನ ಗಿಡಮರ, ಸಸಿ, ಬಳ್ಳಿಗಳೆಲ್ಲವೂ, ಸಂಜೀವಿನಿ ಸಸ್ಯಗಳು. ಅಲ್ಲಿ ತುಳಿಯುವ ಕಲ್ಲುಬಂಡೆಗಳು ಮುಟ್ಟಿದೆಲ್ಲವನ್ನೂ ಅಂದರೆ ಬಯಸಿದ್ದನ್ನು ಕೊಡುವಂತಹ ಚಿಂತಾಮಣಿಗಳು. ಅಲ್ಲಿ ತಿರುಗಾಡುವ ಭೂಮಿಯಲ್ಲವೂ ಪುಣ್ಯಕ್ಷೇತ್ರ. ಆ ಸ್ಥಳಕ್ಕೆ ಹೋದರೆ ಸಾಕು ತನ್ನತಾನೆ ಪುಣ್ಯ ಲಭಿಸುತ್ತದೆ ಎನ್ನುವ ಅದಮ್ಯವಾದ ಕಲ್ಪನೆ ಅಕ್ಕನದು. ಅಲ್ಲಿ ಹರಿಯುವ ನೀರು ನೀರಲ್ಲ, ಅದು ಮುಪ್ಪುರೋಗ, ಸಾವು, ಅಪಮೃತ್ಯು ಎಲ್ಲವನ್ನೂ ತಡೆಯುವಂತದ್ದು. ನಿತ್ಯ ನೂತನ ಯೌವ್ವನವನ್ನು ಹೊಸತನವನ್ನು ಪಡೆಯಬಹುದು ಎಂಬ ಹಂಬಲವನ್ನುಂಟು ಮಾಡುತ್ತಿದ್ದಾಳೆ ಎಂದು ಅಕ್ಕ ನಮ್ಮಲ್ಲಿ ಎಂದು ತೃಪಾಗಲಾರದು? ಕಾಡುಮೃಗಗಳೆಲ್ಲಾ ಬೇಡಿದನ್ನು ನೀಡುವ ಪರದಾಯಕ ಪ್ರಾಣಿಗಳು ಎಡಹುವ ಹರಳೆಲ್ಲ ಚಿಂತಾಮಣಿ. ಇನ್ನೂ ನಾವು ಇಲ್ಲಿ ತುಳಿದಾಡುವ ನೇಡೆದಾಡುವ ಮರಳು, ಕಲ್ಲು ನಾವು ಯಾವುದನ್ನು ಹುಡುಕುಕೊಂಡು ಹೋಗುತ್ತವೆಯೋ ಅದನ್ನು ಕೋಡುವ, ತೋರಿಸುವ ಚಿಂತಾವಣಿಗಳು ಚನ್ನಮಲ್ಲಿಕಾರ್ಜುನನ ಪ್ರೀತಿಯ ತಾಣ ಶ್ರೀಶೈಲವೆಂದು ಕದಳಿ ವನಕ್ಕೆ ಏಕಾಂಗಿಯಾಗಿ ಚನ್ನಮಲ್ಲಿಕಾರ್ಜುನನ ಜೊತೆ ಸೇರಲು ಬಂದೆ ಎಂದು ಅಕ್ಕ ಹೇಳುವ ಈ ಕಲ್ಪನಾತ್ಮಕ ಕಾವ್ಯವನ್ನು ಪ್ರಕೃತಿಗಳಿಗೆ ಸೇರಿ ಹಿಡಿದಿರುವುದು ಒಂದು ರೋಮಾಂಚನವೆನಿಸುತ್ತದೆ.

ಅಕ್ಕ ಲೋಕರೂಢಿಯ ಮಾತುಗಳಿಗೆ ಪ್ರತಿಕ್ರಿಯುಸುತ್ತಾಳೆ. ತನ್ನ ಅನೇಕ ವಚನಗಳಲ್ಲಿ ಲೋಕದಲ್ಲಿರುವ ಸತ್ಯವನ್ನು ಜನ ಕಾಣದೆ ಅಜ್ಞಾನಿಯಂತೆ ಉಳಿದಿರುವ ಮಂದಿಗೆ ತನ್ನ ಅರಿವಿನ ಮೂಲಕ ಅಂತವರಿಗೆ ತಿಳಿಯೇಳಲು ಹೋರಟಿರುವ ಮಹಾದೇವಿಯಕ್ಕನ ಒಂದು ವಚನವನ್ನ ಕಾಣಬಹುದಾಗಿದೆ.

'ಬೆಟ್ಟಕ್ಕೆ ಸಾರವಿಲ್ಲವೆಂಬುದು ತರುಗಳು ಹುಟ್ಟಿದ ಪರಿ ಇನ್ನೆಂತಯ್ಯ?
ಇದ್ದಲಿಗೆ ರಸ ಇಲ್ಲವೆಂಬದು ಕಬ್ಬುನ ಕರಗುವ ಪರಿ ಇನ್ನೆಂತಯ್ಯ?
ಎನಗೆ ಕಾಯ ಇಲ್ಲವೆಂಬುದು ಚೆನ್ನಮಲ್ಲಿಕಾರ್ಜುನ ಒಲವ ಪರಿ ಇನ್ನೆಂತಯ್ಯ?' ೧

ಈ ವಚನದಲ್ಲಿ ಬೆಟ್ಟಕ್ಕೆ ಇದ್ದಲಿಗೆ ಎನಗೆ ಕಾಯ (ಶರೀರವೆ) ಇದಕ್ಕೆ ಸತ್ವವಿಲ್ಲವೆಂದು ಹೇಳುತ್ತಾರೆ. ಆದರೆ ಬೆಟ್ಟಕ್ಕೆ ಸತ್ವವಿಲ್ಲದೆ ವೆಂದರೆ ಮರಗಳು ಈ ಕಲ್ಲು ಬಂಡೆಗಳ ಮಧ್ಯದಲ್ಲಿಯೇ ಹುಟ್ಟತ್ತವಲ್ಲ, ಮಣ್ಣಿನೊಳಗೆ ಕಲ್ಲುಕೂಡ ಬೆರತುಗೊಂಡಿರುತ್ತಲ್ಲ, ಹೀಗೆ ಈ ಮರಗಳು ಜೀವವೇತವು ಎಂದು ಪ್ರಶ್ನಿಸಿದ್ದಾಳೆ. ಇದ್ದಲು ಕಪ್ಪು ಅದನ್ನು ಮೇಲು ನೋಡಿದಲ್ಲ, ನೋಡಿದರೆ ಯಾವು ಪ್ರಯೋಜನಕ್ಕೆ ಬಾರದ

೧. ಅಕ್ಕಮಹಾದೇವಿಯವರ ವಚನ ವಾಕ್ಯ-ಡಾ.ವಿಜಯಕುಮಾರ ಮಹಾನುಭಾವಿಗಳು (೨೦೦೫)

ವಸ್ತುವೆಂದು ಗೋಚರಿಸುತ್ತದೆ. ಆದರೆ ಇದ್ದರು ಒಳರಸದಿಂದ ಮಾತ್ರ ಕಬ್ಬಿಣವಾಗುತ್ತವೆ ಎಂಬುದು ಅದರ ಅಂತರಾಳವನ್ನು ನೋಡಿದವರಿಗೆ ಮಾತ್ರ ತಿಳಿಯುತ್ತದೆಂದು ಅಕ್ಕ ತಿಳಿಯೇಳಿದ್ದಾಳೆ. ನನಗೆ ಶರೀರವೆ ಇಲ್ಲ ಎಂದು ಮಾತಾಡುತ್ತಾರೆ. ಹಾಗಾದರೆ ಚನ್ನೆಮಲ್ಲಿಕಾರ್ಜುನನಿಗೆ ನನ್ನ ಮನಸ್ಸು ಯಾವ ರೀತಿಯಲ್ಲಿ ಒಲಿಯಿತು, ದೇಹವಿಲ್ಲದ ಮೇಲೆ ಮನಸ್ಸು ಇನ್ನೆಲ್ಲಿ ಎಂದು ಪ್ರಶ್ನಿಸುತ್ತಾ, ಅಜ್ಞಾನಿಗಳಿಗೆ ಅರಿವನ್ನು ಮೂಢಿಸಲು ಅಕ್ಕನ ಈ ವಚನ ಬಹಳ ಉತ್ಕೃಷ್ಟದ ಒಳಧ್ವನಿಯಾಗಿದೆ ಎಂದು ಹೇಳಬಹುದು.

'ವನವೆಲ್ಲ ಕಲ್ಪತರು ! ಗಿಡುವೆಲ್ಲ ಮರುಜೇವಣಿ !
ಶಿಲೆಗಳೆಲ್ಲ ಪುರಷ ! ನೆಲವಲ್ಲ ಅವಿಮುಕ್ತ ಕ್ಷೇತ್ರ !
ಜಲವೆಲ್ಲ ನಿರ್ಜರಾಮೃತ ! ಮೃಗವೆಲ್ಲ ಪುರುಷಮೃಗ !
ಎಡರುವ ಹರಳೆಲ್ಲ ಚಿಂತಾಮಣಿ !
ಚೆನ್ನಮಲ್ಲಿಕಾರ್ಜುನಯ್ಯನ ನಚ್ಚಿನ ಗಿರಿಯ ಸುತ್ತಿ
ನೋಡುತ ಬಂದು ಕದಳಿಯ ಬನವಕಡೆ ನಾನು!' ೧

ಪ್ರಕೃತಿ ಸಂವೇದನೆಯ ನೆಲೆಯಲ್ಲಿ ಮುಂದುವರೆಯುತ್ತ, ಈ ಒಂದು ವಚನವನ್ನು ಗಮನಿಸಬಹುದು. ಅಂದರೆ ಪ್ರಕೃತಿಯಲ್ಲಿ ಪರಮಾತ್ಮನ ಪೂಜೆ ನಿರಾಂತಕವಾಗಿ ನಡದೇ ಇದೆ. ಇಂಥ ಪೂಜೆಗೆ ಮಾನವ ನಿರ್ಮಿತ ವಿಧಿವಿಧಾನಗಳಿಲ್ಲ . ಪೂಜೋಪಕರಣಗಳ ಹಂಗಿಲ್ಲ. ಮಂತ್ರ-ತಂತ್ರಗಳ ಅಬ್ಬರವಿಲ್ಲ, ಪ್ರಕೃತಿಯೇತನಾದ ಪರಮಾತ್ಮ ಪ್ರಕೃತಿಯಿಂದಲೇ ಪೂಜೆಗೊಳ್ಳುತ್ತಿರುವ ಅದ್ಬುತ ಚಿತ್ರವೊಂದು ಅಕ್ಕನ ಪ್ರತಿಭಾಪೂರ್ಣ ಶಕ್ತಿಯಿಂದ ಮೂಢಿ ಬಂದಿದೆ.

'ದೃಶ್ಯವಾದ ರವಿಯ ಬೆಳಗು, ಆಕಾಶದ ವಿಸ್ತ್ರೀರ್ಣ
ವಾಯುವಿನ ಚಲನೆ, ತರಗುಲ್ಮಲತಾದಿಗಳ್ಳಿಯ ತಳಿರು ಪುಷ್ಟಿ
ಪಡುವರ್ಣಂಗಳೆಲ್ಲ ಹಗಲಿನ ಪೂಜೆ
ಚಂದ್ರಪ್ರಕಾಶ, ನಕ್ಷತ್ರ, ಅಗ್ನಿ,
ವಿದ್ಯುದ ಆದಿಗಳು ದೀಪ್ತಿಮಯವೆನಿಸಿಪ್ಪವುಗಳಲ್ಲಿ
ಇರುಳಿನ ಪೂಜೆ
ಹಗಲಿರುಳು ನಿನ್ನ ಪೂಜೆಯಲ್ಲಿ ಎನ್ನ ಮರೆದಿಪ್ಪೆನಯ್ಯ
ಚನ್ನಮಲ್ಲಿಕಾರ್ಜುನ.' ೨

ಸೂರ್ಯನ ಬೆಳುಕು ಅನಂತ ಗಾಳಿಯ ಸುಳಿದಾಟ ಗಿಡಮರಬಳ್ಳಿಗಳ ಚಿಗುರು, ಹೂವು ಬಣ್ಣಗಳಲ್ಲಿ ಹಗಲಿನ ಪೂಜೆ, ರಾತ್ರಿಯ ಪೂಜೆಯಂದರೆ, ಚಂದ್ರನ ಬೆಳದಿಂಗಳೂ. ನಕ್ಷತ್ರಗಳು ಮಿನುಗು, ಅಗ್ನಿಯ ಪ್ರಕಾಶ, ದೀಪದ ಬೆಳಕು, ಇವೆಲ್ಲ ಇರುಳಿನ ಪೂಜೆ, ಹಗಲಿರುಳು ಚೆನ್ನಮಲ್ಲಿಕಾರ್ಜುನನೆ ಹಗಲು



೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೨೭೪-ಪುಟ-೧೩೫ (೧೯೬೬)
೨. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೧೩೧-ಪುಟ-೮೦ (೧೯೬೬)

ರಾತ್ರಿ ನಾನು ಈ ನಿಸರ್ಗದ ಪೂಜೆಯಲ್ಲಿ ಧ್ಯಾನ ಮಗ್ನನಾಗ್ನನಾಳಾಗಿ ಈ ಪ್ರಕೃತಿ ಪೂಜೆಯೊಳಗೆ ನನ್ನ ನಾನು ಮರೆತು ನಿಮ್ಮ ಅದ್ಭುತ ಸೃಷ್ಟಿಯನ್ನು ಧ್ಯಾನಿಸುತ್ತ ಆನಂದಿಸಿದ್ದೇನೆ ಎಂದು ಅಕ್ಕನ ಈ ಪ್ರಕೃತಿಯ ಸಂವೇದನೆಯು ತನ್ನ ಒಳ ಧ್ವನಿಯನ್ನು ಸ್ಪಷ್ಟಗೊಳಿಸಿದೆ.

ಇಂದಿರನ ಆಧುನಿಕ ಕವಿ-ಕಾವ್ಯ ಸಂಪ್ರದಾಯ ವೈಚಾರಿಕ ಹಿನ್ನಲೆಯಲ್ಲಿಯೂ ಅಕ್ಕಮಹಾದೇವಿ ಪರಿಭಾವಿಸಿದ ಈ ವಚನವು ಅದ್ಭುತ, ಕಾವ್ಯ ಪ್ರತಿಭೆ, ನಿಸರ್ಗ ನಿರೀಕ್ಷಣೆ ಹಾಗೂ ಅನುಭಾವದ ಚೈತನ್ಯಕ್ಕೆ ಸಾಕ್ಷಿಯಾಗಿದೆ. ವಚನ ಯುಗದಲ್ಲಿಯೂ ಕೂಡ ಹೆಚ್ಚು ಪ್ರಕೃತಿ ಆರಾಧಕರು ಇದ್ದರೂ ಎಂಬುವುದನ್ನು ಈ ವಚನಗಳು ತಿಳಿಸುತ್ತವೆ. ಅಕ್ಕನ ಜೊತೆ ಪ್ರಕೃತಿಯಲ್ಲಿ ನಾವು ಬಸವಣ್ಣನನ್ನು ಕೂಡ ಸ್ಮರಿಸಬಹುದು. ನವೋದಯ ಕಾಲಕ್ಕಿಂತಲೂ ೧೨ನೇ ಶತಮಾನದಲ್ಲಿ ಮೊದಲು ಪ್ರಕೃತಿಯನ್ನೇ ಸ್ಮರಿಸಿದರು ಎಂಬುದಕ್ಕೆ ಅಕ್ಕನ ಪ್ರಕೃತಿ ಸಂವೇದನೆಗಳಿಂದ ಗೋಚರಿಸುತ್ತದೆ.

ಅಕ್ಕನಲ್ಲಿಯೂ ಆಕೆಯ ಅನುಭವಕ್ಕೆ ತೀರಾ ಹತ್ತಿರವಿರುವಂತಹ ಪ್ರಕೃತಿ ಪ್ರತಿಮೆಗಳಿವೆ. ಅದರಲ್ಲೂ ಮದುವೆಯ ಪ್ರತಿಮೆಗಳನ್ನು ಆಕೆ ಬಳಸಿಕೊಂಡು ತನ್ನ ತಾತ್ವಿಕ ಆಕೃತಿಯನ್ನು ಕಟ್ಟಿಕೊಡು ರೀತಿ ಅನನ್ಯವಾದದ್ದು.

'ಜಲದ ಮಂಟಪದ ಮೇಲೆ
ಉರಿಯ ಚಪ್ಪರವನಿಕ್ಕಿ,
ಆಲಿಕಲ್ಲ ಹಸೆಯ ಹಾಸಿ, ಬಾಸಿಗವ ಕಟ್ಟಿ
ಕಾಲಿಲ್ಲದ ಹೆಂಡತಿಗೆ
ತಲೆಯಿಲ್ಲದ ಗಂಡ ಬಂದು ಮುಟ್ಟಿದನು ನೋಡಾ!
ಎಂದೆಂದೂ ಬಿಡದ ಬಾಳುವೆಗೆ ಕೊಟ್ಟರೆನ್ನ
ಚೆನ್ನಮಲ್ಲಿಕಾರ್ಜುನಯ್ಯನಿಗೆ !' [೧]

ನೀರಿನ ಮಂಟಪ, ಉರಿಯುವ ಸೂರ್ಯನ ಚಪ್ಪರ, ವಧುವರರು ಕೂಡಲು ಆಲಿಕಲ್ಲಿ ಹಸಮಣೆ, ಬಾಸಿಗವನ್ನು ಕಟ್ಟಿದರು. "ಕಾಲಿಲ್ಲದ ಹೆಂಡತಿ ಎಂದರೆ ಲೌಕಿಕ ವಾಸನೆಯಿಲ್ಲದ ಸತಿ, ಅನುಭಾವಿ ಶರಣೆ, ತಲೆಯಿಲ್ಲದ ಗಂಡ, ಸಾಕಾರ ಸುಳುಯಿಲ್ಲದ ನಿರಾಕಾರ, ಪರಮಾತ್ಮ ಎಂದೆಯಾ ಬಿಡದ ಬಾಳುವೆ" [೨] ಎಂದು ನಾನು ಚೆನ್ನಮಲ್ಲಿಕಾರ್ಜುನನ ಜೊತೆ ಈ ಪ್ರಕೃತಿಯ ಮದುವೆಯನ್ನು ಮಾಡಿಕೊಟ್ಟಿದ್ದಾರೆ ಎಂದು ಹೇಳಿದ್ದಾಳೆ. ಚಲನೆ ಮತ್ತು ಆಲೋಚನೆಯನ್ನು ಕಾಲು-ತಲೆ ಪ್ರತಿಮೆಗಳು ಸೂಚಿಸುವುದಕ್ಕೆ ಪೂರಕವಾಗಿ ಅಕ್ಕ ಬಳಸಿಕೊಳ್ಳುವ ಪ್ರಕೃತಿ ಪ್ರತಿಮೆಗಳು, ಮದುವೆಯೆಂಬ ಸಂಸ್ಥೆಯನ್ನು ನಮೀಕರಿಸುವಂಥವು ಮಂಟಪ, ಚಪ್ಪರ, ಹಸೆ, ಬಾಸಿಗ ಬಳಸುವಾಗ ಸಂಪ್ರಾದಾಯವನ್ನು ಮುರಿಯುವ ಒಳದನಿಯೊಂದು ಅಲ್ಲಿಯೇ ಕೇಳಿಸುತ್ತದೆ. ಇವುಗಳ ರೂಪಕಗಳಾಗಿ ಬಳಕೆಯಾದ ತನ್ನ ಉದ್ದೇಶಿತ ಗುರಿಯನ್ನು ಯಶಸ್ವಿಯಾಗಿ

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೪೯-ಪುಟ-೬೯ (೧೯೬೬)
೨. ಅಕ್ಕಮಹಾದೇವಿಯವರ ವಚನ ವಾಕ್ಯ-ಡಾ.ವಿಜಯಕುಮಾರ ಮಹಾನುಭಾವಿಗಳು-ಪುಟ ೫೩ (೨೦೦೫)

ತಲುಪುವುದಕ್ಕೆ ನೆರವಾಗುತ್ತದೆ. ಜಲದ ಮಂಟಪ ಉರಿಯ ಚಪ್ಪರ, ಆಲಿಕಲ್ಲು ಹಸೆ, ಅಭಿಜಾತ ಪ್ರತಿಭೆಯೊಂದಕ್ಕೆ ಮಾತ್ರ ಇಂಥ ರೂಪಕಗಳ ಸೃಷ್ಠಿ ಸಾಧ್ಯ. ಮದುವೆಯಾಗಿ ಶರಣಸತಿಯಾಗಿ ಶಾಶ್ವತವಾದ ಪರಮಪದವಿಯನ್ನು ಪಡೆದುಕೊಂಡಿರವುದನ್ನು ವಿವರಿಸುವ ಬೆಡಗಿನ ವಚವೆಂದು ಹೇಳಬಹುದು. ಹೀಗೆ ತಾತ್ವಿಕ ಶೋಧವನ್ನು ಸಾಂಪ್ರಾದಾಯಿಕ ಪ್ರತಿಮೆಗಳನ್ನು ಒಡೆಯುವ ಮೂಲಕ ಮಾಡುವುದರಿಂದ ಆಕೆಯ ಸಂವೇದನೆ ವಿಶಿಷ್ಟವೆನಿಸಿಕೊಳ್ಳುತ್ತದೆ.

'ಈಳೆ-ನಿಂಬೆ-ಮಾವು-ಮಾದಲಿಕ್ಕೆ
ಹುಳಿನೀರನೆರೆದವರಾರಯ್ಯ?
ಕಬ್ಬು-ಬಾಳೆ-ನಾರಿವಾಳಕ್ಕೆ
ಕಳವೆ-ಶಾಲಿಗೆ ಓಗರದ ಉದಕವನೆರೆದವರೀಯ್ಯ !
ಮರುಗ-ಮಲ್ಲಿಗೆ-ಪಚ್ಚೆ-ಮುಡಿವಾಳಕ್ಕೆ
ಪರಮಳಮದ ಕವನೆರೆದವರಾರಯ್ಯ!' [೧]

ದೈವದ ನಿಲುವಿಗೆ ಬಣ್ಣನೆಗೆ ಬರೋಣ, ಈ ವಚನವನ್ನು ಆಸ್ವಾದಿಸಬಹುದು. ಭಗವಂತನ ಸೃಷ್ಟಿ ವೈಚಿತ್ರಕ್ಕೆ ಪ್ರತಿಕ್ರಿಯೆಯಾಗಿ ಶುದ್ದ ವಿಸ್ಮಯಭಾವದ ಅಭಿಯನವನ್ನು ನೋಡುತ್ತೇವೆ ಪ್ರಕೃತಿಯಲ್ಲಿ ಭಗವಂತನ ಶಕ್ತಿ ಇರುವುದರಿಂದಲೇ ಈಳೆ-ನಿಂಬೆ, ಮಾವು-ಮೊದಲಾದವಕ್ಕೆ, ಎಳೆನೀರು-ಹುಳಿ-ಸಿಹಿ ಅಂಶವನ್ನು ತುಂಬುವ ಚಿತ್ರವನ್ನು ಅಕ್ಕ ಹೇಳುವ ಉಪಮಾನ ಅತ್ಯಂತ ಯಶಸ್ವಿಯೂ, ಅಪೂರ್ವವೂ ಆಗಿದೆ. ವಿವಿಧ ರಸ-ರುಚಿಗಳ ಮೂಲಕ ಪ್ರಕೃತಿಯಲ್ಲೂ ವೈವಿಧ್ಯಮಯವಾಗಿ ವ್ಯಕ್ತಗೊಳ್ಳುವ ಸರ್ವಭರಿತ ಪರಮಾತ್ಮನು ಅವೆಲ್ಲವುಗಳಿಗಿಂತ ವಿಶಿಷ್ಠನಾಗಿದ್ದಾನೆ. ಜಗತ್ತಿನ ಸಕಲ ವಸ್ತುಗಳಲ್ಲಿಯೂ ಈ ಪರಾಶಕ್ತಿ ಅಂತರ್ಗತವಾಗಿದ್ದರೂ ಅದೇ ಪರಮಾತ್ಮನಲ್ಲ. ಆತ ಬೇರೆಯಾಗಿದ್ದಾನೆ. ಶಕ್ತಿ-ವಿಶಿಷ್ಠನಾಗಿದ್ದಾನೆ. ಈ ಆಧ್ಯಾತ್ಮ ರಹಸ್ಯವನ್ನು ನಿಸರ್ಗದಲ್ಲಿರುವ ಹೂ-ಹಣ್ಣು-ಕಾಯಿಗಳ ಹೋಲಿಕೆಗಳೊಂದಿಗೆ ನಿರೂಪಿಸುವಲ್ಲಿ ಮಹಾದೇವಿಯಕ್ಕನ ಪ್ರಕೃತಿ ನಿರೀಕ್ಷಣಾ ಶಕ್ತಿ ವ್ಯಕ್ತವಾಗಿದೆ.

ವಚನ ಸಾಹಿತ್ಯದ ಒಂದು ವೈಶಿಷ್ಟ್ಯವಾದ ವೈಚಾರಿಕ ಅಥವಾ ವೈಜ್ಞಾನಿಕ ಮನೋಧರ್ಮಕ್ಕೆ ಉಜ್ವಲ ನಿರ್ದಶನವಾಗಿದೆ ಎಂದು ಹೇಳಬಹುದು.

'ಕಟ್ಟಿದ ಕೆರೆಗೆ ಕೋಡಿ ಮಾಣದು
ಹುಟ್ಟಿದ ಪ್ರಾಣಿಗೆ ಪ್ರಳಯ ತಪ್ಪದಿನ್ನೆಂತಯ್ಯ !
ಅರುಹಿರಿಯರೆಲ್ಲಾ ವೃಥಾ ಕೆಟ್ಟು ಹೋದರಿನ್ನೆಂತಯ್ಯ !
ಚನ್ನೆಮಲ್ಲಿಕಾರ್ಜುನ ದೇವನ
ಗೊತ್ತ ಮುಟ್ಟದವರೆಲ್ಲರೂ ನಿಶ್ಚಿಂತರಾದುರು.' [೨]

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೩-ಪುಟ-೮೮ (೧೯೬೬)
೨. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೧೮೯-ಪುಟ-೯೯ (೧೯೬೬)

ಈ ವಚನದಲ್ಲಿ ವ್ಯಕ್ತವಾಗುವ ಸಂವೇದನೆ, ಕರೆಕಟ್ಟುವ ಮೇಲೆ ಕೋಡಿ ಬೀಳಲೆ ಬೇಕು. ಹುಟ್ಟಿದ ಜೀವಿಗಳು ಒಂದಲ್ಲ ಒಂದು ದಿನ ಸಾಯಲೆಬೇಕು. ಹಿರಿಯರೆನಿಸಿಕೊಂಡರೆಲ್ಲ ಸುಮ್ಮನೆ ನಾಶವಾದರು. ಅಂದರೆ ಅವರು ಪರಮಾತ್ಮನ ಮುಕ್ತಿಯನ್ನ ಪಡೆಯದೇ ನಾಶವಾದರು. ಯಾರು ಚಿಂತೆ ಕಳೆದುಕೊಂಡು ಪರಮಾತ್ಮನಲ್ಲಿ ಮುಕ್ತತ್ಮಾರಾದರು. ಉಳಿದವರು ಸತ್ತು ಹುಟ್ಟುವ ಭವದಲ್ಲಿ ಬಂದರು. ಹುಟ್ಟು ಸಾವು ಯಾರನ್ನು ಬಿಟ್ಟಿದ್ದಲ್ಲ. ನಾವು ಬಿಡುಗಡೆಗೊಳ್ಳಬೇಕಾದರೆ ಆಶೆಗೆಲ್ಲ ಬೇಕೆಂದು ಅಕ್ಕ ತಿಳಿಯನ್ನು ಕರೆ-ಪ್ರಾಣಿಗಳ ಮೂಲಕ ಹೇಳಲು ಹೋರಟು ಮತ್ತೆ ಎಲ್ಲೋ ಒಂದು ಕಡೆ ಹುಟ್ಟು ಸಾವನ್ನ ಪ್ರಕೃತಿಯೊಳಗೆ ಬೇರೆತ್ತಿರುವ ಪರಮಾತ್ಮನ ಮನಸ್ಸನ್ನ ಗೆಲ್ಲಬೇಕೆಂದು ಸೂಚಿಸುತ್ತಿದ್ದಾಳೆ. ಆ ದಿಕ್ಕಿನಲ್ಲಿ ಅವಳ ಆಲೋಚನಲಹರಿ ಅರಿದಿರುವುದು.

ಆಯುಷ್ಯ ತೀರಿಹೋಗುವ ಮುನ್ನ ಭಗವಂತನನ್ನು ನೆನೆದು ಬದುಕನ್ನು ಸಾರ್ಥಕ ಪಡಿಸಿಕೊಳ್ಳುವಂತೆ ಕರೆ ಕೊಡುತ್ತಾಳೆ ಅಕ್ಕ.

> 'ಉದಯಾಸ್ತಮಾನವೆಂಬೆರಡು ಕೊಳಗದಲ್ಲಿ
> ಆಯುಷ್ಯವೆಂಬ ರಾಶಿಯ ಅಳೆಯ ತೀರದ ಮುನ್ನ
> ಶಿವನ ನೆನೆಯಿರಿ ಶಿವನ ನೆನೆಯಿರೀ!
> ಈ ಜನ್ಮ ಬಳಿಕಿಲ್ಲ !' [೧]

ಇಲ್ಲಿ ಆಯುಷ್ಯವನ್ನು ಧಾನ್ಯರಾಶಿಯೆಂದೂ ಉದಯಾಸ್ತ ಮಾನಗಳನ್ನು, ಕೊಳಗಗಳೆದೂ ಕಲ್ಪಿಸಿಕೊಂಡಿರುವುದು ಅತ್ಯಂತ ನವೀನವೆನ್ನಬೇಕು. ಸೂರ್ಯನೆ ಕೊಳಗವೆಂಬುದೂ ಅವಳ ಮನಸ್ಸಿನಲ್ಲಿದ್ದಿತು. ಅಂತೂ ಕೊಳಗದಲ್ಲಿ ಧಾನ್ಯವನ್ನಯುವ ಕ್ರಿಯೆ ನಮ್ಮ ಕಣ್ಣಿಗೆ ಕಟ್ಟಿನಿಲ್ಲುತ್ತದೆ. ಜನಜೀವನ ಚಿತ್ರವೊಂದು ತೆರೆದುಕೊಳ್ಳುತ್ತದೆ.

'ಉದಯಾಸ್ತಮಾನಗಳ ಕೊಳಗ ಮಾನವನ ಆಯಷ್ಯರಾಶಿಯನ್ನು ಅಳೆದು ಬಂದು ಮಾಡುತ್ತಲೆ ಇದೆ.' [೨] ಅದರಲ್ಲೂ ಶಿವನನ್ನು ಮೃತ್ಯುಂಜಯನನ್ನು ನೆನೆದವರ ಕರೆ ಉದಯಾತ್ತಮಾನಗಳ ಹಿಡಿತಕ್ಕೆ ಎಂತು ಸಿಕ್ಕೀತು? ಅಕ್ಕನ ವಚನದಲ್ಲಿ ಪ್ರಕೃತಿಯಲ್ಲಿ ಉಂಟಾಗುವ ಚಲನವಲನಗಳಿಗೆ ಬುದುಕಿನ ಅಳಿವು-ಉಳಿವಲ್ಲಿ ಭಗವಂತನನ್ನು ನೆನೆಯಬೇಕು. ಸೇರಬೇಕು ಎಂದಿದ್ದಾಳೆ.

**4.3.3 ಸ್ತ್ರೀ ಸಂವೇದನೆ**

ಸ್ತ್ರೀ ಸಂವೇದನೆ, ಸ್ತ್ರೀಸ್ವಾತಂತ್ರ್ಯ, ಸ್ತ್ರಿ ಸಮಾನತೆ ಎನ್ನುವ ಪರಿಕಲ್ಪನೆಗಳು 12ನೇ ಶತಮಾನದಿಂದ ೨೧ನೇ ಶತಮಾನದ ಅಂದರೆ ಇಂದಿನ ಯಾಂತ್ರಿಕವಾದ ಹಾಗೂ ಬದಲಾದ ಕಾಲಘಟ್ಟದಲ್ಲಿ ವಿವಿಧ

---

೧. ಐವರು ವಚನಕಾರರು-ಸಿ.ಪಿ.ಕೆ-ಪುಟ ೮೦ (೧೯೭೮)

೨. ಐವರು ವಚನಕಾರರು-ಸಿ.ಪಿ.ಕೆ-ಪುಟ ೮೧ (೧೯೭೮)

ರೀತಿಯ ಚಿಂತನೆಗಳಿಗೆ ಒಳಗಾಗುತ್ತಲೆ ಬಂದಿದೆ. ಇದರ ಫಲವಾಗಿ ಅನೇಕ ಸುಧಾರಣೆಗಳು ಕಂಡು ಬಂದಿದ್ದರೂ ಕೂಡ ಪ್ರತಿಯೊಬ್ಬ ಸ್ತ್ರೀಯು ಕೂಡ ಇವತ್ತು ಸಂಪೂರ್ಣ ಸಮಾನತೆಯನ್ನಾಗಲಿ, ಸ್ವಾತಂತ್ರ್ಯವನ್ನಾಗಲಿ ಅನುಭವಿಸುತ್ತಿಲ್ಲ ಎಂಬುದು ಕಠೋರವಾದ ಸತ್ಯ. ಇವತ್ತಿನ ಬಹುಪಾಲು, ಮಹಿಳೆಯರು (ಹಿಂದಿನಿಂದಲೂ ಕೂಡ) ೧೨ನೇ ಶತಮಾನದ ಶರಣೆಯರು ಎಲ್ಲರೂ ಕೂಡ ಪುರಷಪ್ರಧಾನ ವ್ಯವಸ್ಥೆಯಲ್ಲಿ ನಲುಗಿದವರೆ. ಇದಕ್ಕೆ ಬಹುದೊಡ್ಡ ನಿದರ್ಶನವೆಂದರೆ ಅಕ್ಕಮಹಾದೇವಿ. 'ವೀರಾವಿರಾಗಿಣಿಯಾಗಿ' ಬಯಲನ್ನೆ ಬಟ್ಟೆಯನನಾಗಿಸಿಕೊಂಡು ಸಮಾಜದ ಪುರುಷರ ಕಾಮುಕ ದೃಷ್ಟಿಗೆ ಬಲಿಯಾದದ್ದನ್ನು ತುಂಬಾ ದು:ಖದಲ್ಲೆ ನೋವಿನಲ್ಲೆ ಅಕ್ಕ ತನ್ನ ವಚನಗಳಲ್ಲಿ ದಾಖಲಿಸುತ್ತಾಳೆ. ಸ್ತ್ರೀಶೋಷಣೆ ಎಂಬುದು ಸರ್ವಕಾಲಿಕವಾಗಿ ನಿರಂತರವಾಗಿ ನಡೆಯುತ್ತಲೆ ಬಂದಿದೆ. ವಚನ ಚಳುವಳಿಯ ಕಾಲಕ್ಕೆ ಶರಣರಿಗೆ ಅನಿವಾರ್ಯವಾದಂತಹ ಒಂದು ಸ್ಥಿತಿ ಒದಗಿತ್ತು.

ಅದೆಂದರೆ ಈ ಚಳುವಳಿಯ ಪ್ರಮುಖರಾಗಿದ್ದ ಶೂದ್ರರೂ ಹಾಗೂ ಸ್ತ್ರೀಯರನ್ನು ಎಲ್ಲಾರು ಸಮಾನರು ಎಂದು ಸಾರುವುದು. ಬಿ.ಎಸ್.ಸುಮಿತ್ರಾಬಾಯಿಯವರು ಒಂದು ಕಡೆ. 'ಕನ್ನಡ ಸಾಹಿತ್ಯ ಪರಂಪರೆಯಲ್ಲೇ ಮೊಟ್ಟಮೊದಲ ಬಾರಿಗೆ ಮಹಿಳೆಯರ ನಿಟ್ಟಿನಿಂದ ಅವರ ಹಿತವನ್ನು ಕೋರುವಂಥ ವಿಚಾರಗಳು ಗಮನಾರ್ಹ ಪ್ರಯಾಣದಲ್ಲಿ ಕಂಡು ಬಂದಿರುವುದು ವಚನ ಯುಗದಲ್ಲೆ ಎಂಬುವುದು ಅಚ್ಚರಿಯ ವಿಷಯವಾಗ ಬೇಕಿಲ್ಲ' ಎನ್ನುತ್ತಾರೆ. ಹೀಗೆ ಸ್ತ್ರೀಪರವಾದ ಚಿಂತನೆಗಳು ಮೊದಲಿಗೆ ಹುಟ್ಟಿಕೊಂಡವು ನಿಜ. ಅದರಲ್ಲೂ ಪುರುಷ ನಿರ್ದೇಶಿತ ಸ್ತ್ರೀ ತತ್ವಕ್ಕೆ ಪೆಟ್ಟನ್ನು ಕೊಟ್ಟವಳು ಅಕ್ಕಮಹಾದೇವಿ. ಮತ್ತೆ ಇನ್ನೊಂದು ವಿಚಾರವೆಂದರೆ ನಾವು ವಚನಗಳಲ್ಲಿ ಶಿವಭಕ್ತರೆಲ್ಲ ಒಂದೆ ಎನ್ನುವ ತಾತ್ವಿಕತೆಯನ್ನು ಕಾಣುತ್ತೇವೆ.

ಈ ಅಂಶವನ್ನು ಎಲ್ಲಾ ಶರಣ-ಶರಣೆಯರು ಒಪ್ಪಿಕೊಂಡು ಪ್ರತಿಪಾದಿಸುತ್ತಾರೆ. ಆದರೆ ಶಿವಭಕ್ತರಲ್ಲದ ಅಂದಿನ ಕಾಲದ ಮಹಿಳೆಯರ ಬಗೆಗಿನ ಚಿತ್ರಣ ನಮಗೆ ಎಲ್ಲಾ ಸಿಗುವುದಿಲ್ಲ. ಪುರುಷ ವ್ಯವಸ್ಥೆಯು ಸ್ತ್ರೀಯನ್ನು ಆಸ್ತಿ ಅಥವಾ ಸರಕು ಎಂಬಂತೆಯೇ ಬಳಸಿಕೊಂಡಿದೆ. ಇವತ್ತಿಗೂ ಕೂಡ ಈ ಕೆಟ್ಟ ವ್ಯವಸ್ಥೆ ಬದಲಾಗಿಲ್ಲ. ಭಾರತೀಯ ಸ್ತ್ರೀಯರು ತಮ್ಮ ಇಚ್ಚೆ, ಆಸೆ, ಆಕಾಂಕ್ಷೇಗಳನ್ನು ಬದಿಗಿಟ್ಟು ಗಂಡ ಎನಿಸಿಕೊಂಡವನ ಆಸೆ-ಆಕಾಂಕ್ಷೆ, ಅಭಿಲಾಷೆ, ಅಭಿರುಚಿಗೆ ಪೂರಕವಾಗಿ ಸಹಕರಿಸುವುದರಲ್ಲಿ ತಮ್ಮ ಜೀವನ ಮುಗಿಸಿಕೊಳ್ಳುತ್ತಿದ್ದಾರೆ. ಇದು ಪರಂಪರ ಗತವಾಗಿ ಹಾಗೂ ಧರ್ಮ ಗ್ರಂಥಗಳು, ಶಾಸ್ತ್ರ ಗ್ರಂಥಗಳಲ್ಲಿಯೂ ಕೂಡ ಮಹಿಳೆಯ ಸ್ಥಾನ-ಮಾನಗಳನ್ನು ಸಂಕೀರ್ಣಗೂಳಿಸಲಾಗಿದೆ. ಇವೆಲ್ಲಕ್ಕೂ ಸೆಡ್ಡೊಡೆದಂತೆ ೧೨ನೇ ಶತಮಾನದಲ್ಲಿ ಬೆಳಕಿಗೆ ಬಂದ ನಮ್ಮ ವಚನಕಾರ್ತಿಯರನ್ನು ಹೆಣ್ಣು-ಗಂಡೆಂಬ ಬೇದವಿಲ್ಲದೆ ನಿರ್ಲಿಂಗಿಯ ಭಾವವನ್ನು ವ್ಯಕ್ತಪಡಿಸುವ ಮೂಲಕ ಸ್ತ್ರೀ ಎನ್ನುವ ಕಾರಣಕ್ಕಾಗಿಯೇ ಇದ್ದಂತ ಕೆಲವು ನಿಂಬಂಧನೆಗಳ ಮೀರಿಬಿಟ್ಟದ್ದು ದೊಡ್ಡ ಕ್ರಾಂತಿಯೇ ಸರಿ.

ಅಕ್ಕಮಹಾದೇವಿ ರಾಜಸತ್ತೆ ಪುರಷವ್ಯವಸ್ಥೆಯನ್ನು ಮೀರಿ ಯಾರ ಅಂಗ ಇಲ್ಲದಂತಹ ಯಾವುದೇ ನೀಲುವಿಗೂ ಸಿಲುಕದಂತಹ ದಿಟ್ಟ ನಿರ್ಧಾರದಲ್ಲಿ ಪರಮಾತ್ಮನೇ ನನ್ನ ಗಂಡ ಎನ್ನುತ್ತಾ ಕ್ರಾಂತಿಯ ಕಹಳೆ

ಊದಿದಳು. ಈಗಾಗಿ ಅಕ್ಕನ ವಚನಗಳಲ್ಲಿ ಸ್ತ್ರೀ ಸಂವೇದನೆ ಎನ್ನುವುದು ಬಹುಪಾಲು ಮಹಿಳೆಯರ ಬಿಡುಗಡೆಯ ದಾರಿ ಎನ್ನಬಹುದು. ಮಹಿಳೆಯರಲ್ಲಿ ಹಬ್ಬ-ಹರಿದಿನ, ಪೂಜೆ ಪುರುಸ್ಕಾರ ಎಂದು ಮಾಡುವ ಆಚರಣೆಗಳು ಅಕ್ಕಮಹಾದೇವಿ ಕಲ್ಪಸಿದ ಆಧ್ಯಾತ್ಮಕ ದಾರಿಗೂ ಅಜಾಗಜಾಂತರ ವ್ಯತ್ಯಾಸ ಕಂಡು ಬಂದರು ಕೂಡ ಗಂಡನಿಗಿಂತ ಮಿಗಿಲಾದ ದೈವವನ್ನು ಆತ್ಮ ಸಂಗಾತ ಎಂದು ಪ್ರದಿಪಾದಿಸಿದ ರೀತಿ ಮಾತ್ರ ಪುರಷನ ನೆರಳಲ್ಲಿ ದೌರ್ಜನ್ಯದಲ್ಲಿ ಬದುಕು ನಡೆಸುವ ಸ್ತ್ರೀಯರಿಗೆ ಬಹು ದೊಡ್ಡ ಬಿಡುಗಡೆಯ ದಾರಿ ಎನ್ನಬಹುದು ಹಾಗೂ ನೊಂದ ಮಹಿಳೆಯರಿಗೆ ಮಾನಸಿಕ ನಿರಾಳತೆಯು ಅಕ್ಕ ಚಿಂತನೆಗಳಿಂದ ಸಿಗುತ್ತದೆ.

ವಚನ ಚಳುವಳಿಗೆ ಕೆಲವು ವಿಶೇಷ ನಿಲುಗಳಿದ್ದವು ಎಲ್ಲರಿಂದಲೂ ಒಪ್ಪತವಾದಂತಹ ನಿಲುವುಗಳು. ಇಂತಹ ನಿಲುವುಗಳಿಗೆ ಅಕ್ಕ ಬದ್ದಳಾಗಿದ್ದಾಳೆ? ಎಂಬುದ್ದನ್ನು ಈ ವಿಭಾಗದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪದ ವಚನಗಳ ಹಿನ್ನಲೆಯಲ್ಲಿ ವಿಶ್ಲೇಷಿಸಲಾಗುವುದು. ಮೊದಲನೇಯದಾಗಿ ವಚನ ಚಳುವಳಿಯು ಆತ್ಮದ ನೆಲೆಯಿಂದ ಸ್ತ್ರೀ-ಪುರುಷರು ಸಮಾನರು ಎಂಬ ತಾತ್ವಿಕ ನಿಲುವು ತಾಳಿತ್ತು. ಬಹಳಷ್ಟು ವಚನಕಾರರು ಇದನ್ನು ಒಂದೇ ಸೂತ್ರದಡಿ ತಮ್ಮ ವಿಚಾರಗಳನ್ನು ವ್ಯಕ್ತಪಡಿಸಿದರು. ಅಕ್ಕ ಮಹಾದೇವಿ ನೀಲಾಲೋಚನೆಯರು ಗಂಡು-ಹೆಣ್ಣುವೆಂಬ ಭೇಧವನ್ನು ಮೀರಿದ ನೆಲೆ ತಮ್ಮದೆಂದು ಪ್ರತಿಪಾದಿಸಿದರು. ಅಕ್ಕ ಮಹಾದೇವಿ ತನ್ನ ವಚದಲ್ಲಿ ಹೀಗೆ ಹೇಳುತ್ತಾಳೆ.

'ಹೆಣ್ಣು ಹೆಣ್ಣಾದೊಡೆ ಗಂಡಿನ ಸೂತಕ
ಗಂಡು ಗಂಡಾದೊಡೆ ಹೆಣ್ಣಿನ ಸೂತಕ !
ಮನದ ಸೂತಕಕ್ಕೆ ತೆರೆಹಂಟೀ ಅಯ್ಯ !
ಮೊದಲಲ್ಲಿದ ಸೂತಕಕೆ ಮರುಳಾಯಿತ್ತು ಜಗವೆಲ್ಲ !
ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯನೆಂಬ
ಗರುವಂಗೆ ಜಗವೆಲ್ಲಾ ಹೆಣ್ಣು ನೋಡಾ !' ೧

ಸ್ತ್ರೀ ಸಂವೇದನೆಯ ದೃಷ್ಠಿಯಿಂದ ಇದು ಶ್ರೇಷ್ಠ ವಚನ ಎನ್ನಬಹುದು. ಹೆಣ್ಣು ಎಂಬ ಕಾರಣಕ್ಕೂ, ಪರಂಪರೆಯ ಅವಳನ್ನು ಹಲವು ಶೋಷಣೆಗೆ ತಳ್ಳಿತ್ತು. ಈ ವಚನದ ಧ್ವನಿಯಲ್ಲಿ ಪರಂಪರೆಯನ್ನು ಮೆಟ್ಟಿ ನಿಲ್ಲಿದ ದಿಟ್ಟತನವಿದೆ. ಹೆಣ್ಣು-ಗಂಡು ಎನ್ನುವ ಭಾವವನ್ನು ಇಟ್ಟುಕೊಳ್ಳುವುದೇ ಸೂತಕ ಎನ್ನುತ್ತಾಳೆ. ಅಲ್ಲದೆ ಚನ್ನಮಲ್ಲಿಕಾರ್ಜುನನಿಗೆ ಇಡೀ ಜಗತ್ತನ್ನೆ ಹೆಣ್ಣಿನ ರೂಪದಲ್ಲಿ ಅರ್ಪಿಸಿದ್ದಾಳೆ. ಒಬ್ಬ ಸಾಮಾನ್ಯ ಸ್ತ್ರೀಯು ತನ್ನ ಇಡೀ ಬದುಕು ಸರ್ವಸ್ವಗಳನ್ನು ಪತಿಗೆ ಅರ್ಪಿಸುತ್ತಾಳೆ. ಅಂತೆಯೆ ಭಗವಂತನ ದೃಷ್ಟಿಯಲ್ಲಿ ಇಡೀ ಜಗತ್ತೇ ಹೆಣ್ಣು. ಅಟ್ಟ ಹಾಸದಲ್ಲಿ ಮೆರೆಯುವ ರಾಜ ವ್ಯವಸ್ಥೆಯಾಗಲಿ, ಪುರುಷರಾಗಲೀ, ಯಾರು ದೊಡ್ಡವರಲ್ಲ ಎಂದು ಪರೋಕ್ಷವಾಗಿ ಅಲ್ಲಗೆಳೆಯುತ್ತಾಳೆ.

ಎರಡನೆಯದಾಗಿ ಧಾರ್ಮಿಕ ಜೀವನ ಮತ್ತು ಆಧ್ಯಾತ್ಮಿಕ ಸಾಧನೆಗಳಿಗೆ ಗೃಹಸ್ತ ಜೀವನವು ಅನುಕೂಲಕರವೆಂದು ಒಪ್ಪಿದ್ದು, ಶಿವಶರಣರ ಚಳುವಳಿಯ ಪ್ರಮುಖವಾದ ಮತ್ತೊಂದು ನಿಲುವು.

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೨೨೯-ಪುಟ-೧೧೯ (೧೯೬೬)

ಅಕ್ಕಮಹಾದೇವಿ ತಳೆದ ನಿಲುವುಗಳಿಗೂ ವಿರುದ್ಧವಾದ ಅಂಶಗಳು ಕಂಡು ಬರುತ್ತದೆ. ಅಕ್ಕಮಹಾದೇವಿ ಬಾಲ್ಯದಿಂದಲೇ ಶಿವನ ಕುರಿತಾದ ಪುರಾಣ ಕಥೆಗಳಿಂದ ಪ್ರಭಾವಿತಳಾಗಿದ್ದಳು. ದೇವರನ್ನು ಪೂಜಿಸಿ ವರಿಸಿಕೊಳ್ಳಬಹುದೆಂದು ಮೊದಲು ತಳೆದಿದ್ದು, ಅನಂತರ ತಾನು ಬಯಸದ ಬಲವಂತದ ಗೃಹಸ್ಥ ಜೀವನಕ್ಕೆ ಕಾಲಿರಿಸಿದ ಚನ್ನಮಲ್ಲಿಕಾರ್ಜುನನ್ನು ಪಡೆಯಬೇಕಾಗದರೆ ಈ ಬಂಧನ ಮೋಹಗಳಿಂದ ಮುಕ್ತರಾಗಬೇಕೆಂದು ನಿರ್ಧರಿಸಿ ರಾಜ, ಅರಮನೆ, ತಂದೆ-ತಾಯಿ, ಬಂಧುಬಳಗ, ಎಲ್ಲವನ್ನು ತೋರೆದು ಚನ್ನಮಲ್ಲಿಕಾರ್ಜುನನ್ನು ಅರಸುತ್ತಾ ವೀರವಿರಾಗಣಿಯಾಗಿ ಹೊರನೆಡೆಯುತ್ತಾಳೆ.

ಹೀಗೆ ಸಂಸಾರ ಎಂಬುವ ಬಂಧನದಿಂದ ಮುಕ್ತಳಾಗುವ ಅಕ್ಕ ಸ್ತ್ರೀಯ ಸ್ವಾತಂತ್ರ್ಯ ಪ್ರತೀಕವಾಗಿ ಕಾಣುತ್ತಾಳೆ. ಸ್ತ್ರೀಯರಿಗೆ ಸ್ವಾತಂತ್ರ್ಯ ಎನ್ನುವುದು ತನಗೆ ತಾನೇ ಸಿಗುವುದಿಲ್ಲ. ಬದಲಿಗೆ ತಾನೇ ಪಡೆದುಕೊಳ್ಳಬೇಕೆಂದು ತೋರಿಸಿದ್ದಾಳೆ. ಅಲ್ಲದೆ ಸ್ತ್ರೀ ಸ್ವಾತಂತ್ರ್ಯ ಎಂಬುದು ಎಷ್ಟು ಕಠಿಣ ಎಂಬುದನ್ನು ತನ್ನ ಬದುಕಿನ ವಚನಗಳಿಂದ ತೋರಗೊಳ್ಳುತ್ತಾಳೆ. ಲೌಕಿಕ ಬದುಕನೆಲ್ಲದ ಮೆಟ್ಟಿ ನಿಲ್ಲದ ಅಕ್ಕ ಅದನ್ನು ಮಾಹೆ ಎಂದು ಕರೆಯುತ್ತಾಳೆ. ಅದನ್ನು ಅಕ್ಕ ಈ ಕೆಳಗಿನ ವಚನದಲ್ಲಿ ಹೀಗೆ ಹೇಳುತ್ತಾಳೆ.

'ಎನ್ನ ಮಾಯಂಯ ಮದವ ಮುರಿಯಯ್ಯ !
ಎನ್ನ ಕಾಯದ ಕಳವಳವ ಕೆಡಿಸಯ್ಯ !
ಎನ್ನ ಜೀವದ ಜಂಜಡವ ಬಿಡಿಸಯ್ಯ !
ಎನ್ನ ದೇವ ಚೆನ್ನಮಲ್ಲಕಾರ್ಜುನಯ್ಯ"
ಎನ್ನ ಸುತ್ತಿದ ಮಾಯಾ ಪ್ರಪಂಚದ ಬಡಿಸಾ ನಿಮ್ಮ ಧರ್ಮ !' [೧]

ಈ ವಚನದಲ್ಲಿ ಸರ್ವದರ ಸಂಬಂಧವನ್ನು ಮುರಿದುಕೊಳ್ಳಲು ಅಕ್ಕ ಹಂಬಲಿಸಿದ್ದಾಳೆ. ಅನುಪಮ ರೂಪನೆಯಾಗಿದ್ದ ಅಕ್ಕ ತನ್ನ ಯೌವ್ವನ ಸೌಂದರ್ಯ ಆಕರ್ಷಣೆಗಳು ನನ್ನಲ್ಲಿ ಇಲ್ಲದಾಗಲಿ ಎಂದು ಭಗವಂತನಲ್ಲಿ ಬೇಡುತ್ತಾಳೆ. ಹೆಣ್ಣು ಎಂಬ ಕಾರಣಕ್ಕೆ ನನ್ನಲ್ಲಿರುವ ಭಯ ಲಜ್ಜೆಯನ್ನು ಹೋಗಲಾಡಿಸು, ಜೀವ ಧರಿಸಿ ಬಂದ ಕಾರಣದಿಂದ ಇರುವ ಸಂಬಂಧಗಳನ್ನು ದೂರವಾಗಿಸು ನಿನ್ನ ನಂಬಿಬಂದಿದ್ದೇನೆ. ನನ್ನ ಸುತ್ತುವರಿದಿರುವ ಮಾಯಾ ಪ್ರಪಂಚವನ್ನು ಅದರೊಟ್ಟಿಗೆ ಬರುವ ಒದೊಂದೇ ಬಂಧನಗಳಿಂದ ತನ್ನ ಮುಕ್ತಿ ಮಾಡು ಎಂದು ಬೇಡುತ್ತಾಳೆ. ಈ ರೀತಿ ವೈರಾಗ್ಯ. ಬಹಳ ದೊಡ್ಡದು. ಎಂತಹ ನಿಲುವುಗಳು ಬಹಳ ದೊಡ್ಡದು. ಒಬ್ಬ ಹೆಣ್ಣಾಗಿಯೂ ಎಂತಹ ನಿಲುವುಗಳ ತಾಳಬಹುದೆಂಬುದನ್ನು ಅಕ್ಕ ತೋರಿಸಿಕೊಟ್ಟಿದ್ದಾಳೆ.

ಸಂಸಾರ ಜೀವನವೋ? ಅಥವಾ ಸನ್ಯಾಸ ಜೀವನವೋ? ಎನ್ನುವ ಉಭಯದ ಸಂಕಟ ಅಕ್ಕನನ್ನು ಕಾಡದೆ ಬಿಟ್ಟಿಲ್ಲ. ಒತ್ತಾಯಕ್ಕೆ ಮುಗಿದು ರಾಜ ಕೌಶಿಕನ್ನು ಮದುವೆಯಾಗಿ ಅರಮನೆ ಎನ್ನುವ ಬಂಗಾರದ ಪಂಜರದಲ್ಲಿದ್ದಾಗ ಹಾಡಿಕೊಂಡ ವಚನ ಇದು ಎನಿಸುತ್ತದೆ.

---

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೨೯-ಪುಟ-೫೧ (೧೯೬೬)

'ಉಳ್ಳುದೊಂದು ತನು, ಉಳ್ಳುದೊಂದು ಮನ
ನಾನಿನ್ನಾವ ಮನದಲ್ಲಿ ಧ್ಯಾನವ ಮಾಡುವೆನಯ್ಯ
ಸಂಸಾರವನಾವ ಮನದಲ್ಲಿ ತಲ್ಲೀಯವಹೆನಯ್ಯ
ಅಕಟಕಟಾ ಕೆಟ್ಟೆ ಕೆಟ್ಟೆ ಸಂಸಾರೆಕ್ಕೆಲ್ಲಾ ಪರಮಾರ್ಥಕ್ಕೆಲ್ಲಾ
ಎರಡಕ್ಕೆ ಬಿಟ್ಟ ಕರುವಿನಂತೆ ಬಿಲ್ವ ಬೆಳವಲಕಾಯನೊಂದಾಗಿ
ಹಿಡಿಯಲುಬಾರದು, ಚೆನ್ನಮಲ್ಲಿಕಾರ್ಜುನ !' [೧]

ತನಗೊದಗಿರುವ ಇಬ್ಬಂದಿತನವನ್ನು ಅಕ್ಕ ರೂಪಗಳ ಮೂಲಕ ಬಲು ಸೊಗಸಾಗಿ ಹೇಳಿದ್ದಾಳೆ. ಇರುವುದೊಂದೆ ಮನ, ಇರುವುದೊಂದೆ ತನು ಅದು ಪಾರಮಾರ್ಥಕ್ಕೆ ಮಾತ್ರ ಮೀಸಲು ಸಂಸಾರ. ಪಾರಮಾರ್ಥ ಎರಡನ್ನು ಮಾಡಲು ಆಗದು ಎನ್ನುತ್ತಾಳೆ. ಈ ವಚನ ಅಕ್ಕನೊಳಗಿನ ಬಹುದೊಡ್ಡ ಅಂತಃಸತ್ವವನ್ನು ಹೇಳುತ್ತದೆ. ಲೌಕಿಕದ ಜೀವನಕ್ಕೆ ಅಕ್ಕ ಒಗ್ಗುವುದಿಲ್ಲ. ಭೋಗದ ಜೀವನಕ್ಕಿಂತ ಅನುಭವದ ಜೀವನ ಅವಳನ್ನು ಸೆಳೆಯುತ್ತದೆ. ಅತ್ಯಂತ ಕಠಿಣ ನಿಷ್ಠುರವಾದ ತ್ಯಾಗದ ಜೀವನವನ್ನು ಆಯ್ದುಕೊಳ್ಳುವ ಅಕ್ಕಮಹಾದೇವಿ ಎಲ್ಲಾ ಸ್ತ್ರೀಯರೊಳಗೂ ಸೂಕ್ಷ್ಮವಾಗಿ ಅಡಕವಾಗದು. ಅಂತಸತ್ವದ ಪ್ರತಿಕವಾಗಿದ್ದಾಳೆ ಎನ್ನಬಹುದು.

'ಬೆಂದ ಸಂಸಾರ ಬೆಂಬಿಡದೆ ಕಾಡಿಹುದಯ್ಯ ಏವೆನೇವನಯ್ಯ ಅಂದಿಂದಿನ ದಂದುಗಕ್ಕೆ? ಸಂಸಾರವೆಂಬ ಹಗೆಯನ್ನು ತಂದೆ ಎನ್ನ ವಂಶವಂಶದಪ್ಪದೆ ಅರಸಿಕೊಂಡು ಬರುತ್ತಿವೆಯಯ್ಯ' [೨] ಇವರೆಡು ವಚನಗಳಲ್ಲೂ ಕೂಡ ಬೇಯಿಸುವ, ನೋಯಿಸುವ, ಶತ್ರುವಾಗಿ ಕಾಡುತ್ತಿರುವ ಸಂಸಾರದಿಂದ ಮುಕ್ತಗೊಳಿಸು ಎಂದು ಬೇಡುತ್ತಾಳೆ. ಸಂಸಾರವು ಅನುಭಾವ ಜೀವನಕ್ಕೆ ದೊಡ್ಡ ಅಡ್ಡಿಯೆಂದೆ ಸಹಜವಾಗಿ ಹೇಳುಲಾಗುತ್ತದೆ. ಸಂಸಾರದ ಬೋಗ ಜೀವನದಿಂದ ಪಾರಾಗಲು ಅನುಭಾವ ಜೀವನಕ್ಕೆ ದುಮುಕಿದ್ದಾಳೆ. ಆದರೆ ಹೆಣ್ಣಾದವಳಿಗೆ ಅನುಭಾವ ಜೀವನ ಎನ್ನುವುದು ಎಷ್ಟು ಕಷ್ಟ ಎಂಬುದು ಅಕ್ಕ ನಡೆಸಿದ ಪ್ರತಿಯೊಂದು ಆಂತರೀಕ ಹಾಗೂ ಬಾಹ್ಯ ಹೋರಾಟಗಳಿಂದ ತಿಳಿದು ಬರುತ್ತದೆ. ಚನ್ನಮಲ್ಲಿಕಾರ್ಜುನನಿಗೆ ಬಂದವಳಾದ್ದರಿಂದ ಉಳಿದೆಲ್ಲ ಪುರುಷರು ತನಗೆ ಎಲ್ಲರೂ ಸಮಾನರೆನ್ನುತ್ತಾಳೆ ಈ ವಚನದಲ್ಲಿ.

'ನೋಡುವ ಕಂಗಲಿಗೆ ರೂಪಿಂಬಾಗಿರವು
ನೀವು ಮನನಾಚದೆ ಬಂದಿರಣ್ಣ
ಕೇಳಿದ ಶ್ರೋತ್ರಸೊಗಸಿಗೆ ನೀವು ಮರುಳಾಗಿ ಬಂದಿರಣ್ಣ
ನಾರಿಯೆಂಬ ರೂಪಿಂಗಿ ನೀವು ಒಲಿದು ಬಂದಿರಣ್ಣ
ಮೂತ್ರವು ಬಂದು ಬಸರುವ ನಾಳವೆಂದು
ಕಂಗಾಣದೆ ಮುಂದುಗೆಟ್ಟು ಬಂದಿರಣ್ಣ !

೧. ಅಕ್ಕಮಹಾದೇವಿಯವರ ವಚನ ವಾಕ್ಯ-ಡಾ.ವಿಜಯಕುಮಾರ ಮಹಾನುಭಾವಿಗಳು-ವ-೧೨ ಪುಟ ೧೬ (೨೦೦೪)
೨. ಅಕ್ಕಮಹಾದೇವಿಯವರ ವಚನ ವಾಕ್ಯ-ಡಾ.ವಿಜಯಕುಮಾರ ಮಹಾನುಭಾವಿಗಳು- ಪುಟ ೨೮ (೨೦೦೪)

ಬುದ್ಧಿಗೇಡಿ ತನದಿಂದ ಪರಮಾರ್ಥದ ಸುಖವ ಹೋಗಲಾಡಿಸಿಕೊಂಡು
ಇದಾವ ಕಾರಣವೆಂದರಿಯದೆ ನೀವು ನರಕಹೇತುವೆಂದರಿದೂ
ಮನಹೇಸದೆ ಬಂದಿರಣ್ಣ
ಚೆನ್ನಮಲ್ಲಿಕಾರ್ಜುನನಲ್ಲದೆ ಮಿಕ್ಕಿಹ ಪುರುಷರೆನಗೆ ಸಹೋದರರು
ಛೀ ಹೋಗಾ ಮರುಳೇ !' ೧

ಹೆಣ್ಣು ಎನ್ನುವ ಕಾರಣಕ್ಕೆ ಸಮಾಜ ಅವಳನ್ನು ಬೋಗದ ವಸ್ತುವಾಗಿ ಅವಳ ದೇಹ ಸಿರಿಗೆ ಮರುಳಾಗಿ ಬರುವವರಿಗೆ ಅಕ್ಕಮಹಾದೇವಿ ಈ ವಚನದಲ್ಲಿ ತಕ್ಕ ಉತ್ತರ ನೀಡಿದ್ದಾಳೆ. ಅಕ್ಕಮಹಾದೇವಿ ಅನುಭಾವ ಜೀವನವನ್ನು ಆಯ್ದುಕೊಂಡು ಬಂದರು ಕೂಡ ಅವಳನ್ನು ಕಾಡಿಸುವ (ಬನವಾಸಿಯ) ಉಡುತಡಿಯ ರಾಜ ಕೌಶಿಕನಂತೆ ತನ್ನನ್ನು ಮದುವೆಯಾಗು ಎಂದು ಕೇಳುಕೊಳ್ಳುವವರಿಗೆ ಈ ವಚನದಲ್ಲಿ ಉತ್ತರಿಸಿದ್ದಾಳೆ.

ಇಂದ್ರಿಯಗಳಿಗೆ ಆಕರ್ಷಿತರಾಗಿ ಬಂದಿದ್ದೀರಿ. ರೂಪು, ಕೀರ್ತಿ, ಪ್ರಸಿದ್ದಿಯಲ್ಲದೆ ನಾರಿ ಎಂಬ ಸಲಿಗೆಯಿಂದ ಬಂದಿದ್ದೀರಿ. ನನಗೆ ಚನ್ನಮಲ್ಲಿಕಾರ್ಜುನನಲ್ಲದೆ ಇನ್ನೂಳಿದ ಪುರಷರು ಸಹೋದರರು. ಹೋಗಿ ಹುಚ್ಚಪ್ಪಗಳಿರಾ ಎನ್ನುತ್ತಾಳೆ. ಅಕ್ಕನ ಏದುರಾದ ಅಡೆತೆಡೆಗಳಿಂದಾಗಿ ಅವಳ ದೀರ ವೈರಾಗ್ಯದ ಸತ್ವಪರೀಕ್ಷೆಯು ನಡೆದು ಅದರಲ್ಲಿ ಅಕ್ಕ ಗೆದ್ದಿರುವುದು ಕಂಡುಬರುತ್ತದೆ. ಅಕ್ಕ ಲೌಕಿಕಕ್ಕೆ ತನ್ನ ಜೀವನದಲ್ಲಿ ಅವಕಾಶ ನೀಡಲಿಲ್ಲ. ಏನಿದ್ದರೂ ಬರಿಯ ಪಾರಮಾರ್ಥಕ್ಕೆ ತನ್ನ ಇಡೀ ಬದುಕನ್ನು ಅರ್ಪಿಸಿಕೊಂಡ ಶ್ರೇಷ್ಠ ಜಂಗಮಳು.

ಸ್ತ್ರೀ ಸಂವೇದನಗೆ ಅತ್ಯಂತ ಪ್ರಸಿದ್ದ ವಚನ ಇದಾಗಿದೆ. ಅರಮನೆಯ ಸುಖದ ಭೋಗದ ಜೀವನವನ್ನು ನಿಷ್ಠೂರವಾಗಿ ತೊರೆದು ಹೊರಟ ಅಕ್ಕ ಚನ್ನಮಲ್ಲಿಕಾರ್ಜುನನೇ ತನ್ನ ಪತಿ ಎಂದು ಜಗತ್ತಿಗೆ ಸಾರಿ ಹೇಳಿದಳು. ಅವಳ ಕಲ್ಪನೆಯ ಚನ್ನಮಲ್ಲಿಕಾರ್ಜುನ ಹೇಗಿದ್ದಾನೆ? ಅಲ್ಲದೇ ಅವಳ ಭಾವ ಲೋಕದಲ್ಲಿ ಲೋಕದ ಗಂಡಸರಿಗೆ ಯಾವ ಸ್ಥಾನವಿದೆ? ಎನ್ನುವುದನ್ನು ಈ ವಚನದಲ್ಲಿ ಕೇಳಿದ್ದಾಳೆ.

'ಸಾವಿಲ್ಲದ ಕೇಡಿಲ್ಲದ ಚೆಲುವಂಗಾನೊಲಿದೆನವ್ವ !
ಎಡೆಯಿಲ್ಲದ ಕಡೆಯಿಲ್ಲದ ತೆರೆಯಲ್ಲದ ಕುರುಹಿಲ್ಲದ
ಚೆಲುವಂಗಾನೊಲಿದೆ ನವ್ವ !
ಭವಲುಲ್ಲದ ಭಯವಿಲ್ಲದ ಚೆಲುವಂಗಾನೊಲಿದೆ !
ಕುಲಸೀಮೆಯಿಲ್ಲದ ನಿಸ್ಸೀಮೆ ಚೆಲುವಂಗಾನೊಲಿದೆ !
ಇದುಕಾರಣ ಚೆನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ !
ಈ ಸಾವ ಕೆಡುವ ಗಂಡರನೊಯ್ದು ಒಲೆಯೊಗಿತ್ತು ತಾಯೆ !' ೨

---

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೧೬೬-ಪುಟ-೯೨ (೧೯೬೬)
೨. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೨೮೮-ಪುಟ-೧೩೯ (೧೯೬೬)

ರೂಪವಿಲ್ಲದ, ಸಾವಿಲ್ಲದ, ಕೇಡಿಲ್ಲದ, ಭವವಿಲದ್ಲ, ಕುಲಸೀಮೆಯಿಲ್ಲದ ನಿರ್ಭಯ ಚೆಲುವ ಚನ್ನಮಲ್ಲಿಕಾರ್ಜುನ ನನ್ನ ಗಂಡ. ಮರಣವಿರುವ ಲೋಕದ ಗಂಡಂದಿರ ತೆಗೆದುಕೊಂಡು ಹೋಗಿ ಒಲೆಯೊಳಗಿಕ್ಕು ಎನ್ನುತ್ತಾಳೆ. ಅಕ್ಕನಿಗೆ ಮಾತಿನಲ್ಲಿ ಎಂತಹ ದಿಟ್ಟ ತನವಿದೆ ಸ್ತ್ರೀ ಸ್ವಾತಂತ್ರ್ಯವನ್ನು ಮುಖ್ಯವಾಗಿಟ್ಟುಕೊಂಡು ಅವುಗಳಿಗೆ ಗಟ್ಟಿತನವನ್ನು ಕಲ್ಪಿಸಿದ ದೀರೆ ಅಕ್ಕಮಹಾದೇವಿ. ತನಗೆ ತೋಚಿದ್ದನ್ನ ವಿಚಾರದಾರೆಗಳನ್ನು ನಿರ್ಭಯವಾಗಿ ತನ್ನ ವಚನಗಳಲ್ಲಿ ಎತ್ತ ಇಡಿದಿದ್ದಾಳೆ ಅಕ್ಕಮಹಾದೇವಿ ತನ್ನ ಬದುಕಿದ್ದಂತಹ ಕಾಲ ಘಟ್ಟದಲ್ಲಿ ಇಂದಂತಹ ಸಂಕೀರ್ಣತೆಗಳನ್ನು ತನ್ನ ಆಧ್ಯಾತ್ಮದ ಹೋರಾಟದ ಮೂಲಕ ಮೀರಿ ಜಗತ್ತಿನ ಮೊಟ್ಟಮೊದಲ ಮಹಿಳಾ ಸ್ವಾತಂತ್ರ್ಯದ ಹೋರಾಟಗಾತಿಯಾಗಿ ಕಂಡು ಬರುತ್ತಾಳೆ.

ಅಕ್ಕಮಹಾದೇವಿಯ ವೈಯಕ್ತಿಕ ಅಂತರಂಗದ ಭಾವನೆಯನ್ನು ಈ ರೀತಿಯಾಗಿ ಗುರುತಿಸಬಹುದು. ಅಕ್ಕ ಲಿಂಗತ್ವದ ಅನುಭವದ ಹಿನ್ನಲೆಯಲ್ಲಿ ತಾನು ತನ್ನ ದೇಹ ಮತ್ತೀತರ ವಸ್ತುಗಳಿರಬಹುದು, ಉಡುಗೆ-ತೊಡುಗೆಗಳಿರಹುದು ಎಲ್ಲವನ್ನು ಪೂರ್ವ ತಯಾರಿಗೆ ಅಣಿಗೊಳಿಸುವಳು. ಗಂಡನಾದ ಚನ್ನಮಲ್ಲಿಕಾರ್ಜುನನ್ನು ಬರಮಾಡಿಕೊಳ್ಳುವ ಬಗ್ಗೆ ನೋಡಬಹುದು.

> 'ಇಂದೆನ್ನ ಮನೆಗೆ ಗಂಡ ಬಂದಹನೆಲೆಗವ್ವ !
> ನಿಮನಿಮಗೆಲ್ಲ ಶೃಂಗಾರ ಮಾಡಿಕೊಳ್ಳಿ
> ಚೆನ್ನಮಲ್ಲಿಕಾರ್ಜುನನೀಗಳೇ ಬಂದಹನು
> ಇದಿರುಗೊಳ್ಳ ಬನ್ನಿರೇ ಅವ್ವಗಳಿರಾ !' [೧]

ಇಲ್ಲಿ ಅಕ್ಕ ಸೂಚಿಸುವ ಪೂರ್ವತಯಾರಿ ಯಾವುದಕ್ಕೆ? ಅಂತಿಮವಾಗಿ ಗಂಡನ್ನು ಸೇರಲು ಈ ವಚನವನ್ನು ಗಮನಿಸಿದರೆ ಅಕ್ಕ ತನ್ನ ಗಂಡನನ್ನು ಬರಮಾಡಿಕೊಳ್ಳಲು ತಯಾರಾಗುತ್ತಾಳೆ ಹೇಗೆ? ಸಿಂಗಾರ ಮಾಡಿಕೊಂಡು ಅಂದರೆ ಅವನನ್ನು ಕೂಡಲು "ಹೆಣ್ಣತನದ ಪಾತ್ರ ಪೋಷಣೆ ಅನಿವಾರ್ಯವಾಗಿದೆ. ಅದು ಯಾವ ರೀತಿಯದು? ಅದು ಶರಣತ್ವದ ಮೂಲದಾತುವಾಗಿದೆ. ಚನ್ನಮಲ್ಲಿಕಾರ್ಜುನ ಬಂದಿಹನು ನಿಮನಿಮಗೆಲ್ಲಾ ಶೃಂಗಾರ ಮಾಡಿಕೊಳ್ಳಿ" [೨] ಎಂದು ಹೇಳುವಲ್ಲಿ ಆಸಕ್ತಿಯಾಗಿರುವುದು ಏನೆಂದರೆ, ಕಾವ್ಯ ಮಾಪದ ಮೌಲ್ಯ ಮಾಪನವಲ್ಲ. ೧೨ನೇ ಶತಮಾನದ ವ್ಯಕ್ತಿ ಕಲ್ಪನೆಗೂ ಮತ್ತು ಆಧೂನಿಕ ಕಾಲದಲ್ಲಿ ನಮಗೆ ದಕ್ಕುವ ಕಲ್ಪನೆಗೂ ಇರುವ ವ್ಯತ್ಯಾಸಗಳನ್ನು ಗಮನಿಸಬಹುದು.

ಈ ವಚನ ಅಕ್ಕನಿಗೆ ಆಂತರಂಗೀಕ ಸಂವಾದ ಎನ್ನುವಂತೆ, ಅಂತರ್ಮುಖಿಯೆಂಬಂತೆ ಕಂಡರು ಬಹುಮುಖ ವ್ಯಾಪ್ತಿ ಅನಾವರಣಗೊಳ್ಳುತ್ತದೆ. ಮೊದಲನೇಯದಾಗಿ ಅಕ್ಕ ತನ್ನ ಅಸ್ತಿತ್ವವನ್ನು ರೂಪಿಸಿಕೊಳ್ಳುವುದು, ದೈವದ ಜೊತೆಗಿನ ಸಂಬಂಧದ ಮೇರೆಗೆ ಈ ಸಂದರ್ಭದಲ್ಲಿ ತನ್ನನ್ನು ತಾನು ಅಲಂಕರಿಸಿಕೊಳ್ಳುವುದು ಮಹಿಳೆಯ ವೇಷಭೂಷಣದ ಪ್ರತೀಕವಾಗಿರುವ ಒಡವೆವಸ್ತ್ರ, ಅಲಂಕಾರದೊಂದಿಗೆ ತನ್ನ ಗಂಡನಿಗಾಗಿ ಅಲಂಕರಿಸಿಕೊಂಡು ಗಂಡನನ್ನು ಎದುರುಗೊಳ್ಳುವುದು (ಅಂದರೆ

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೩೨೨-ಪುಟ-೧೪೬ (೧೯೬೬)
೨. ಅಕ್ಕಮಹಾದೇವಿ ವಚನಗಳು ಸಾಂಸ್ಕೃತಿಕ ಮುಖಾಮುಖಿ-ಸಂ-ರಹಮತ್ ತರೀಕೆರೆ-ಪುಟ-೩೩ (೨೦೦೪)

ಬರಮಾಡಿಕೊಳ್ಳುವುದು). ಇಲ್ಲಿ ಅಕ್ಕ ಹೆಣ್ತನದ ಪರಿದಿಯಲ್ಲಿಯೇ ವ್ಯವಹರಿಸುವುದನ್ನು ಕಾಣಬಹುದು. ಮಲ್ಲಿಕಾರ್ಜುನನೊಡನೆ ಸೇರಲು ಶರೀರವನ್ನು ಅಲಂಕೃತಗೊಳಿಕೊಂಡು ಶರೀರದ ಮೂಲಕವೇ ಲೌಕೀಕವಾಗಿ ಅನಿವಾರ್ಯವಾಗಿರುವಂತಹ ಎಲ್ಲಾ ಪ್ರತಿಮೆಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

'ಅಕ್ಕ ಕೇಳಕ್ಕ ಆನೊಂದು ಕನಸಕಂಡೆ !
ಆನೊಂದು ತನಕ ಕಂಡೆ !
ಚಿಕಿಚಿಕ್ಕ ಜಡೆಯ ಸುರಿಪಲ್ಲ ಗುರುವನು
ಬಂದೆನ್ನ ನೆರೆದ ನೋಡವ್ವ !
ಆತನನಪ್ಪಿಕೊಂಡು ತಳವೆಳಗಾದೆನೆಲಿಗೇ !
ಚೆನ್ನಮಲ್ಲಿಕಾರ್ಜುನನ ಕೂಡಿ
ಕಣ್ತೆರೆದು ತಳವೆಳಗಾದೆನೆಲಗೇ !' [೧]

ಈ ವಚನದಲ್ಲಿ ಅಕ್ಕ ತಾನು ಕಂಡಂತಹ ಕನಸಿನ ಬಗೆ ಹೇಳುತ್ತಾ ಕನಸಿನಲ್ಲಿ ದರ್ಶನ, ನಿದ್ರೆಯಲ್ಲಿ ಸಾನಿಧ್ಯ ಸುಖ ಚಿಕ್ಕ ಚಿಕ್ಕ ಜಡೆಯನ್ನು ಹೊಂದಿರುವನು. ಮುದ್ದು ಮುಖಕ್ಕೆ ಒಪ್ಪುವ ಎಳೆಯ ದಂತ ಪಂಕ್ತಿಗಳನ್ನು ಉಳ್ಳ ಒಬ್ಬ ತಪಸ್ವಿ ಬಂದಿದನ್ನು ಕಂಡೆ, ಅವನ್ನು ಅಪ್ಪಿಕೊಂಡೆ (ಚನ್ನಮಲ್ಲಿಕಾರ್ಜುನನ್ನು), ಕನಸಿನಲ್ಲಿ ಕಣ್ತೆರೆದು ನೋಡಿದರೆ ಅದು ಕನಸೆಂದು ಗೋಚರಿಸುವುದು. ಅಂದರೆ ಮಹಾದೇವಿಯಕ್ಕ ಸಂಪೂರ್ಣವಾಗಿ ತನ್ನ ಮಲ್ಲಿಕಾರ್ಜುನನಿಗೆ ಅರ್ಪಿಸಿಕೊಂಡಿರುವುದರ ಭಾವ, ಅವನ ವರ್ಣನೆ ಸುಂದರವಾದ ಹೋಲಿಕೆಗಳು ಇಲ್ಲಿ ಸತಿಪತಿ ಭಾವದ ಕಲಾತ್ಮಕತೆಯನ್ನು ಕಾಣಬಹುದಾಗಿದೆ. ಒಂದು ಅತ್ಯಂತ ಉತ್ತುಂಗದ ಸ್ಥಿತಿಯನ್ನು ಅನುಭವದಲ್ಲಿ ಕಂಡು ವೈಯಕ್ತಿಕವಾಗಿ ಅನುಭವಿಸುತ್ತಿರುವುದು ಚನ್ನಮಲ್ಲಿಕಾರ್ಜುನನ್ನು ನಾಮಸ್ಮರಣೆಯಲ್ಲಿ ಮೈಮರೆತಿರುವುದು ಮಹಾದೇವಿಯಕ್ಕನ ಅಂತರಂದಲ್ಲಿ ಚನ್ನನೊಲುವೆ ಆಳವಾಗಿ ಜೊತೆಗೆ ಅಕ್ಕಕೇಳಕ್ಕ ಎಂಬ ಆತ್ಮೀಯ ದಾಟಿಯಲ್ಲಿ ಈ ವಚನ ಪ್ರಾರಂಭವಾಗುತ್ತದೆ. ಅಂತ ಕನಸಿನ ಹೇಳಿಕೊಳ್ಳಬೇಕಾದರೆ ಕೇಳುವ ವ್ಯಕ್ತಿ ಆತ್ಮೀಯಳಾಗ್ದಿದಾರೆ ಮಾತ್ರ ಸಾಧ್ಯ. ಆತನನ್ನು ಅಪ್ಪಿಕೊಂಡು ತಳವಳಗಾದನೇಗೆ ಆಕೆಗೆ ಅವನ ರೂಪದಿಂದಲೆ ಅವನಾರು ಎಂದು ಗೊತ್ತು. ತಳವಳಗಾದೆ ಎನ್ನುವ ಪದಕ್ಕೆ ಆನಂದಭರಿತಳಾದೆ ಎಂಬ ಅರ್ಥ ಸರಿ ಆಗುತ್ತದೆ. ಚನ್ನಮಲ್ಲಿಕಾರ್ಜುನನ ಜೊತೆಗೂಡಿ ಕಣ್ತೆರೆದು ನೋಡಿದರೆ ಅವನಿಲ್ಲ. ಅಕ್ಕ ಕನಸಿನಲ್ಲಿ ಚನ್ನಮಲ್ಲಿಕಾರ್ಜುನನ್ನು ಕಾಮಾತ್ಮಕ ಕಂಡಿರುವ ಚಿತ್ರಣವನ್ನೆ ಹೇಳಿಕೊಂಡಿದ್ದಾಳೆ.

'ಅಯ್ಯ ನೀ ಕೇಳಿದರೆ ಕೇಳು ಕೇಳಿದಿದ್ದರೆ ಮಾಣು
ನಾ ನಿನ್ನ ಹಾಡಿಲ್ಲದೆ ಸೈರಿಸಲಾರೆನಯ್ಯ !
ಅಯ್ಯ ನೀನೊಲಿದರೆ ಒಲಿ. ಒಲಿಯದಿದ್ದರೆ ಮಾಣು
ನಾ ನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯ !

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೯೦-ಪುಟ-೭೦ (೧೯೬೬)

ಅಯ್ಯ ನೀ ಮೆಚ್ಚಿದರೆ ಮೆಚ್ಚು. ಮೆಚ್ಚದಿದ್ದರೆ ಮಾಣು
ನಾ ನಿನ್ನನಪ್ಪಿದಲ್ಲದೆ ಸೈರಿಸಯಾರೆನಯ್ಯ
ಅಯ್ಯ ನೀ ನೋಡಿದರೆ ನೋಡು ನೋಡುದಿದ್ದರೆ ಮಾಣು
ನಾ ನಿನ್ನ ನೋಡಿ ಹಿಗ್ಗಿ ಹಾರೈಸದಿಲ್ಲದೆ ಸೈರಿಸಲಾರೆನಯ್ಯ
ಚೆನ್ನಮಲ್ಲಿಕಾರ್ಜನಯ್ಯ ನಾ ನಿಮ್ಮ ಪೂಜೆಗೆ
ಹರುಷದಲೋಲಾಡುವೆನ್ನ !’ [೧]

ಅನುಭವದ ತೀವ್ರತೆಯನ್ನು ಎಷ್ಟು ನಯವಾಗಿ ಕಾವ್ಯತ್ಮಕವಾಗಿ ಎಣಿದಿದ್ದಾಳೆ. ಎಲ್ಲ ಧ್ವನಿ ಇದೆ ಎಂಬುವಂಥದ್ದು ಈ ವಚನದಲ್ಲಿ ವ್ಯಕ್ತವಾಗುತ್ತದೆ. ಸ್ತ್ರೀಯೂ ಕೂಡ ವೈರಾಗ್ಯವನ್ನು ಹೊಂದಬಲ್ಲಳು. ಸ್ತ್ರೀ ಮೋಕ್ಷಗೆ ಆಡಿ ಎಂಬುವದುನ್ನು ತೊರೆದು ತನ್ನ ಮೋಕ್ಷವನ್ನ ತಾನೇ ಕಾಣಬಲ್ಲಳೆಂದು ತೋರಿಸಿದ ಅಕ್ಕಮಹಾದೇವಿ ಉತ್ಕಟ ಶಿವಭಕ್ತಿ ಮತ್ತು ತೀವ್ರ ವೈರಾಗ್ಯ ಸಾಧನೆಯ ಸುಖ-ದು:ಖಗಳನ್ನು ಸಮಾಭಾವದಿಂದ ಸ್ವೀಕರಿಸುವ ಸಮಾಧಾನ ಚಿತ್ತವನ್ನು ಒದಗಿಸಿದೆ.

ಅಕ್ಕನ ಭಗವಂತನಾನುರಾಗದ ತೀವ್ರತೆ ಒತ್ತಡಗಳನ್ನು ಈ ವಚನ ಸಮರ್ಥವಾಗಿ ನಿರೂಪಿಸುತ್ತದೆ. ಪ್ರಾಮಾಣಿಕವಾದ ಉತ್ಕಟವಾದ ಭಾವ ಅಭಿವ್ಯಕ್ತಿಗಾಗಿ ಹಾತೊರೆಯುತ್ತದೆ. ಅಕ್ಕ ಹಾಡುವುದು, ಪೂಜಿಸುವುದು, ಇತರರನ್ನು ಮೆಚ್ಚಿಸುವುದಕ್ಕಾಗಿಯಲ್ಲ, ಪ್ರದರ್ಶನಕ್ಕಾಗಿಯಲ್ಲ. ತನ್ನ ಅಂತರಂಗದ ವೇದನೆ ಸಂವೇದನೆಗಳಿಗೆ ಅಭಿವ್ಯಕ್ತಿ ಎಷ್ಟು ಅನಿವಾರ್ಯ ಎಂಬುದು ವೇದ್ಯವಾಗುತ್ತದೆ. ಅಂಥ ಅಭಿವ್ಯಕ್ತಿಯ ಶ್ರೇಷ್ಠ ಕಲೆಯಾಗತಕ್ಕದ್ದು - ಅಕ್ಕನ ಈ ವಚನ ಭಕ್ತಿ ಮಿಮಾಂಸೆಯ ದೃಷ್ಠಿಯಿಂದ ಮಾತ್ರವಲ್ಲ. ಕಾವ್ಯಮಿಮಾಂಸೆಯ ದೃಷ್ಠಿಯಿಂದಲೂ ಬಹಳ ಉಪಾದೇಯವಾಗಿದೆ.

ಅಕ್ಕನ ಪ್ರೇಮದ ಒಂದು ಉತ್ತುಂಗದ ಸ್ಥಿತಿಯನ್ನು ಈ ವಚನ ಇನ್ನೊಂದು ರೀತಿಯಲ್ಲಿ ತಿಳಿಸುತ್ತದೆಂದು ಅಲೋಚಿಸಬಹುದು. ನಿಂದನೆ, ವಂದನೆಗಳನ್ನು ಸಹನೆಯಿಂದ ಎದುರಿಸುವ ತಾಳ್ಮೆ - ತ್ಯಾಗ ಬುದ್ಧಿ ಅಕ್ಕನಲ್ಲಿ ಅಪಾರವಾಗಿದೆ. ಲೋಕದೊಳಗೆ ಹುಟ್ಟಿದ್ದ ಬಳಿಕ ಸುತ್ತಿ-ನಿಂದನೆಗಳು ಬಂದರೆ ಮನದಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕೆಂಬ ಲೋಕನೀತಿಗೆ ಬದ್ಧಳಾಗಿದ್ದಾಳೆ.

“ಭಕ್ತಿಯುಳ್ಳವರ ದೈವವರೊಂದು ಕೋಟಿ ಈ ಸಾರ್ವಕಾಲಿಕ ಸಮಾಜ ನೀತಿಯನ್ನು ಮನಗಂಡಿದ್ದಾಳೆ. ಅಂತೆಯೇ ಸಮಾಜವೊಡ್ಡಿದ್ದ ಪ್ರತಿಕೂಲಗಳಿಗೆ ಹೆದರಿ ಹಿಂಜರಿಯದೆ ಆತ್ಮೋದ್ದಾರದ ಗುರಿಯತ್ತ ಗಮನಿಸಿದ್ದಾಳೆ. ಹಗಲಿರುಳು ನಿತ್ಯಾ ಸಾಕ್ಷಾತ್ಕಾರಕ್ಕಾಗಿ ಪರಿತಪಿಸಿದ್ದಾಳೆ. ಉನ್ನತ ಆದರ್ಶಕ್ಕಾಗಿ ಚಂದನದಂತೆ ತನು ಮನಗಳನ್ನು ತೇಯ್ದುಕೊಂಡು ಅನುಭಾವದ ಪರಿಮಳವನ್ನು ಬೀರಿದ್ದಾಳೆ. ಆದರಕ್ಕೂ ಸಿಹಿ, ಉದರಕ್ಕೂ ಸಿಹಿಯೆನಿಸುವ ಸಂದೇಶವನ್ನಿತ್ತಿದ್ದಾಳೆ.” [೨]

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೮೩-ಪುಟ-೬೮ (೧೯೬೬)
೨. ಅಕ್ಕಮಹಾದೇವಿ- ಡಾ.ಶಾಂತಾ ಇಮ್ರಾಪೂರ-ಪುಟ-೪೧೩ (೨೦೦೫)

ಅಕ್ಕ ನಗ್ನತೆಯಲ್ಲಿರುವ ಕಾಮರೂಪವನ್ನೇ ಸಮರ್ಥಿಸಿಕೊಂಡಿರಿರುವ ಒಂದು ವಚನವನ್ನ ಈ ಕೆಳಕಂಡಂತೆ ಗಮನಿಸಬಹುದು.

'ಫಲ ಒಳಗೆ ಪಕ್ವವಾಗಿಯಲ್ಲದೆ
ಹೊರಗಣ ಸಿಪ್ಪೆ ಒಪ್ಪೆಗೆಡದು!
ಕಾಮನ ಮುದ್ರೆಯ ಕಂಡು ನಿನಗೆ ನೋವಾದೀತೆಂದು
ಆ ಭಾವದಿಂದ ಮುಚ್ಚಿದೆ.
ಇದಕ್ಕೆ ನೋವೇಕೆ?
ಕಾಡದಿರಣ್ಣ ಚೆನ್ನಮಲ್ಲಿಕಾರ್ಜುನದೇವನ ಒಳಗಾದವಳ!' [೧]

ಒಳಗಣ ಪಕ್ವತೆಯ ಫಲವೇ ಈ ಹೊರಗಣ ಬತ್ತಲೆ ಎಂಬುದನ್ನು ಸಾರ್ಥಕ ದೃಷ್ಟಾಂತವೊಂದರಿಂದ ಮನಗಾಣಿಸುತ್ತಾಳೆ. ಆದರೆ ಅಪಕ್ವತೆಯೂ ನಗ್ನತೆಗೆ ಕಾರಣವಾಗಬಹುದಲ್ಲ ! ಇದು ಅಂಥ ನಗ್ನತೆಯಲ್ಲಿ ವಾಸ್ತವವಾಗಿ ಇದು ದಿಗಂಬರತ್ವ ಇಷ್ಟಕ್ಕೂ ಆಕೆಯಲ್ಲಿ ನಗ್ನತೆಯಾದರು ಎಲ್ಲಿ? ಚನ್ನಮಲ್ಲಿಕಾರ್ಜುನ ಅವಳನ್ನು ಒಳಗೊಂಡು ಆವರಿಸಿದ್ದಾನೆ. ಲೋಕದ ಕಣ್ಣಿಗೆ ಕಾಣದಿರಬಹುದಷ್ಟೆ? ದಿಗಂಬರವೆನೆಗೆ ಎಂಬ ಉಕ್ತಿಯೂ ಈ ದೃಷ್ಠಿಯಿಂದ ಅರ್ಥವತ್ತಾಗುತ್ತದೆ.

ಹಸಿವಿಗೆ ಭಿಕ್ಷಾನ್ನ ತೃಷೆಗೆ ಕರೆ,ಹಳ್ಳ, ಬಾವಿ, ಶಯನಕ್ಕೆ ಹಾಳು ದೇಗುವಗಳಾದರೂ ಸರಿ ಬದುಕಿನ ಕನಿಷ್ಟ ಅವಶ್ಯಕೆತಗಳನ್ನು ಇಷ್ಟನಿಷ್ಟಗಳಿಲ್ಲದೇ ನಿರ್ವಿಕಾರ ಚಿತ್ತದಿಂದ ಸ್ವೀಕರಿಸುವ ಮಹಾದೇವಿಯಕ್ಕನ ಚಿತ್ತಶುದ್ದಿಯನ್ನು ವೈರಾಗ್ಯ ಸಾಧನೆಯ ಪ್ರಥಮ ಹಂತದಲ್ಲಿಯೇ ಗುರುತಿಸಿದ್ದೇವೆ. ಆದರೆ ವೈರಾಗ್ಯ ಸಿದ್ದಿಯ ಸೋಪಾನವೇನ್ನರಿದ ಆತ್ಮಬಲ ಈಗ ಹಸಿವು, ಕೃಷಿ, ಕಾಮ, ಕ್ರೋಧಾರಿ, ಅರಿಷಡ್ವರ್ಗಗಳನ್ನು ನಿಯಂತ್ರಿಸಬಲ್ಲ ಆತ್ಮಬಲ ನಮಿಸಿದೆ.

ಚನ್ನಮಲ್ಲಿಕಾರ್ಜುನನಿಗೆ ಶರಣಸತಿಯಾದ ಮಹಾದೇವಿ ಒಲವಿನ ಓಲೆಯನೊಯ್ಯುತ್ತಿದ್ದಾಳೆ. ಸಮರಸಾಕಾಂಕ್ಷೆಯ ಓಲೆಯನೊಯ್ಯುತ್ತಲಿದ್ದಾಳೆ.

'ಹಸಿವೆ ನೀನು ನಿಲ್ಲು ನಿಲ್ಲು, ತೃಷಯೇ ನೀನು ನಿಲ್ಲು ನಿಲ್ಲು
ನಿದ್ರೆಯೇ ನೀನು ನಿಲ್ಲುನಿಲ್ಲು, ಕಾಮವೇ ನೀನು ನಿಲ್ಲು ನಿಲ್ಲು
ಕ್ರೋಧವೇ ನೀನು ನಿಲ್ಲು ನಿಲ್ಲು, ಮೋಹವೇ ನೀನು ನಿಲ್ಲು ನಿಲ್ಲು
ನಾನು ಚನ್ನಮಲ್ಲಿಕಾರ್ಜುನದೇವರ ಅವಸರವ
ಓಲೆಯನೊಯ್ಯುತ್ತಲಿದ್ದೇನೆ ಶರಣಾರ್ಥಿ.' [೨]

---

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೧೮೩-ಪುಟ-೯೬ (೧೯೬೬)

೨. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೧೨೧-ಪುಟ-೭೮ (೧೯೬೬)

ಹಸಿವು, ತೃಷ, ನಿದ್ರೆ, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ಸಚರಾಚರ ಇವುಗಳಿಗೆ ಹೇಳಿತ್ತಿದ್ದಾಳೆ. ನೀವು ಸ್ವಲ್ಪ ಅಲ್ಲೇನಿಲ್ಲಿ. ಇದುವರೆಗೆ ನಿಮ್ಮ ಜೊತೆ ವ್ಯವಹರಿಸಿವೆ. ನಿಮ್ಮ ಸಂಬಂಧಗಳು ಈ ದೇಹ ಇರುವವರೆಗೆ ಇದ್ದದ್ದೆ. ಅದೆ ಊಟ, ನಿದ್ರೆ, ಆಲಸ್ಯ, ರಾಗ, ಭೋಗಗಳು ಇದೊಂದು ಮುಗಿಯದ ಕಥೆ. ರಾಗಬೋಗಾದಿಗಳು ಈ ದೇಹಕ್ಕಂಟಿದ ಜನ್ಮ ಜನ್ಮದ ಸಂಬಂಧಗಳು. ಇವುಗಳು ತೊಡಕಿನಲ್ಲಿ ಬಿದ್ದರೆ ಬಿಡುಗಡೆಯೆ ಇಲ್ಲ. ನನಗೀಗ ತುರ್ತು ಕೆಲಸ ಇದೆ. ನನಗೆ ಗುರು ಹಿರಿಯರು, ಶರಣರು ಒಂದು ಪತ್ರಕೊಟ್ಟಿದ್ದಾರೆ. ನಾನು ಕೂಡಲೆ ಚನ್ನಮಲ್ಲಿಕಾರ್ಜುನನಿಗೆ ಕೂಡಬೇಕಾಗಿದೆ. ಎಲ್ಲವನ್ನು ಬಿಟ್ಟು ಅಂದರೆ ತೇಜಿಸಿ ಚನ್ನಮಲ್ಲಿಕಾರ್ಜುನನಲ್ಲಿ ಮುಕ್ತವಾಗಿ ಸೇರಲು ಆತೋರಿಸುತ್ತಿರುವುದರ ಭಾವ ಇಲ್ಲಿದೆ.

ಜಕ್ಕ ಪಕ್ಷಿಯಂತೆ ತನ್ನ ಪ್ರೀತಿ ಪ್ರೇವಮವನ್ನು ಚೆನ್ನಮಲ್ಲಿಕಾರ್ಜುನನಲ್ಲಿ ಹೇಗಿತ್ತು ಎಂಬುದನ್ನು ಈ ವಚನದಲ್ಲಿ ತಿಳಿಪಡಿಸುತ್ತಿದ್ದಾಳೆ ಅಕ್ಕ.

'ಬಾದಹನೆಂದು ಬಟ್ಟೆಯ ನೋಡಿ
ಬಾರದಿದ್ದರೆ ಕರಗಿ ಕೊರಗಿದೆನವ್ವ!
ತಡವಾದರೆ ಬಡವಾದೆ ಕಾಯೆ !
ಚೆನ್ನಮಲ್ಲಿಕಾರ್ಜುನ ಬಂದಿರುಳಗಲಿದರೆ
ತೆಕ್ಕೆ ಸಿಡಿಲದ ಜಕ್ಕಪಕ್ಷಿಯಂತಾದೆನವ್ವ!'[೧]

ಚೆನ್ನಮಲ್ಲಕಾರ್ಜುನ ಬರುವವನೆಂದು ದಾರಿ ನೋಡುತ್ತಾ ಬರದೆ ಇದ್ದಾಗ ಚಿಂತೆಯ ನೆಲೆಯಾಗುವುದು ಅಕ್ಕನ ಮನ. ಕಳವಳಕ್ಕೀಡಾಗುವುದು. ಬರದಿದ್ದರೆ ಅವನ ನೆನೆಪಲ್ಲೇ ಕೊರಗಿ ನೀರಾಗುವುದು. ತಡವಾದರೆ ತನ್ನ ಮನದ ಸಿರಿ ಬಡವಾಗುವುದು ತಾಯೇ ಎಂದು ಅವಳ ಮನದ ಸಂವೇದನೆಯನ್ನು ಅಕ್ಕ ಚೆನ್ನಮಲ್ಲಿಕಾರ್ಜುನನ ಅಗಾದವಾದ ಪ್ರೇಮದಲ್ಲಿ ವ್ಯಕ್ತಗೊಳಿಸುತ್ತಿದ್ದಾಳೆ. ಚನ್ನಮಲ್ಲಿಕಾರ್ಜುನನ ಒಂದು ರಾತ್ರಿ ಆಗಲಿದರೂ ನಾನು ತಾಳಲಾರೆ. ಜಕ್ಕವಕ್ಕಿಯಂತೆ (ಪಕ್ಷಿಗಳು) ಅಪ್ಪಿದ ತುಸು ಸಡಿಲಿಸಿದರೂ ಚಡಪಟಿಸುವುದು. ಈ ಪಕ್ಷಿಯ ಉಪಮೆ ಪ್ರೀತಿ- ಪ್ರೇಮದ ಪರಾಕಾಷ್ಠೆ ಕನ್ನಡ ಕಾವ್ಯದಲ್ಲಿ ಈ ಪ್ರೀತಿ ಪ್ರಣಯ ಪ್ರೇಮದ ಸಂಗತಿಗಳು ಇಷ್ಟೊಂದು ನವಿರಾಗಿ ಭಾವಗೀತಾಭಿವ್ಯಕ್ತಿಪಡಿಸುವುದು ಕಡಿಮೆ ಅಕ್ಕನ ಈ ಭಾವ ತೀವ್ರ ಪ್ರೇಮದನುರಾಗವನ್ನು ಸೂಚಿಸುವಂಥದ್ದು.

'ಉದಯದಲೆದ್ದು ನಿಮ್ಮ ನೆನೆವೆನಯ್ಯ !
ನಿಮ್ಮ ಬಿರವ ಹಾರುತಿರ್ಪೆನಯ್ಯ!'[೨]

---

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೩೨೩-ಪುಟ-೧೫೬ (೧೯೬೬)
೨. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೩೧೪-ಪುಟ-೧೫೩ (೧೯೬೬)

ಈ ವಚನವನ್ನು ಜಾನಪದದ ಒಂದು ಕವಿತೆಗೆ ಹೋಲಿಸಬಹುದು. ಬೆಳಿಗ್ಗೆಯ್ದ ಯಾರ್ಯಾರ ನೆನೆಯಲ್ಲಿ ಎಳ್ಳು ಜೀರಿಗೆ ಬೆಳವ ಭೂಮಿ ತಾಯ ಎಂಬಂತೆ, ಅಕ್ಕ ಎಂದೊಂದು ಘಳಿಗೆಯಲ್ಲಿ ಅಂದರೆ ಸೂರ್ಯೋಧಯದಲ್ಲಿ ನಿಮ್ಮ ನೆನೆವನಯ್ಯ. ತನು ಒಡೆಯನಾದ ದೈವವಾದ ಪ್ರಾಣಸಕನಾದ ಚೆನ್ನಮಲ್ಲಿಕಾರ್ಜುನನ್ನು ಈ ರೀತಿಯಲ್ಲಿ ನೆನೆವ ಪರಿಯನ್ನು ಅಕ್ಕ ಚೆನ್ನಮಲ್ಲಿಕಾರ್ಜುನನ ಬರುವಿಕೆಗಾಗಿ ಕಾಯುತ್ತಿರುವುದು. ಅವನಿಗಾಗಿ ಹಸಿಯನ್ನು ಹರಿದರವನಕ್ಕೆ ಅವನ ಪಾದಕ್ಕೆ ಅರ್ಪಿಸುವಂತಹದ್ದು. ಅವನ ಮೆಚ್ಚುಗೆಗೆ ಪಾತ್ರವಾಗುವಂತ ಸಮಯಕ್ಕೆ ಅಕ್ಕ ಕಾಯ್ದು ಕೂತಿರುವುದು ಅವಳಲ್ಲಿರುವ ಅದಮ್ಯವಾದ ಪ್ರೇಮ ಭಾವನೆಯನ್ನ ವ್ಯಕ್ತಗೊಳಿಸುತ್ತದೆ.

'ಹಗಲು ನಾಲ್ಕು ಜಾವ ನಿಮ್ಮ ಕಳವಳದಲ್ಲಿಪ್ಪೆನು
ಇರುಳು ನಾಲ್ಕು ಜಾವಲಿಂಗದ ವಿಕಲಾವಸ್ಥೆಯಲ್ಲಿ ಪ್ಪೆನು!
ಹಗಲಿರುಳು ನಿಮ್ಮ ಹಂಬಲದಲ್ಲಿ ಮೈಮರೆದೊರಗಿದೆನು!
ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಒಲುಮೆ ನಟ್ಟು
ಹಸಿವು-ತೃಷೆ-ನಿದ್ರೆಯ-ಮರೆದೆನು!' [೧]

ಹಗಲಿರುಳು ಅಕ್ಕನ ಮನದಲ್ಲಿ ಚೆನ್ನಮಲ್ಲಿಕಾರ್ಜುನ ನೆಲೆಗೊಂಡಿರುವುದು. ಪ್ರೇಮದ ವಿರಹದ ಬೇಗೆಯಲ್ಲಿ ಈ ವಚನ ವ್ಯಕ್ತಗೊಳಿಸುತ್ತದೆ. ಆ ವಿಹರದ ಬೇಗೆಯಲ್ಲಿ ಯಾವುದಾದರ ಬಗ್ಗೆಯ ಆಸಕ್ತಿ ಇಲ್ಲದೆ ನಿರಾಸಕ್ತಿಯ ಭಾವನೆಯನ್ನು ವ್ಯಕ್ತಗೊಳಿಸುತ್ತಿರುವುದು. ಹಗಲಿರುಳು ತನು-ಮನವೆಲ್ಲವೂ ಅವನೇ ತುಂಬಿರುವಾಗ ಹಸಿವಿನ ನಿದ್ರೆಯ-ಮರೆವೇನು ಎಂದು, ತನ್ನ ಮನದ ಪ್ರೇಮದ ಅಮಲಿನಲ್ಲಿ ತನ್ನ ಬಗ್ಗೆಯೂ ಕೂಡ ನಿರಾಸಕ್ತಿ ಮೂಡಿದೆ ಎಂಬುವುದನ್ನು ವ್ಯಕ್ತಗೊಳಿಸಿದ್ದಾಳೆ. ಪರಮಾತ್ಮನ ಚಿಂತೆಯಲ್ಲಿ ಅವಳಿಗೆ ಯಾರು ಬೇಕು ಎನಿಸುವುದಿಲ್ಲ. ಬಂಧು-ಬಳಗವೆಲ್ಲವೂ ಅಕ್ಕನಿಗೆ ಚೆನ್ನನಾಗಿದ್ದಾನೆ.

ಅಕ್ಕನ ಕಾಮದ ಉತ್ಕಟತೆಯನ್ನ ಕಾಮದ ಭಾವನೆ ವ್ಯಕ್ತಗೊಳ್ಳುವ ಒಂದು ವಚನವನ್ನು ಈ ಕೆಳಕಂಡಂತೆ ನೋಡಬಹುದು.

'ಮಚ್ಚು ಅಚ್ಚುಗವಾಗಿ ಒಪ್ಪಿದ ಪರಿಯ ನೋಡಾ !
ಎಚ್ಚರೆ ಗಲಿದೋರದಂತೆ ನಡಬೇಕು!
ಅಪ್ಪಿದರೆ ಅಸ್ಥಿಗಳು ನಗ್ಗುನುರಿಯಾಗಬೇಕು!
ಬೆಚ್ಚರೆ ಬೆಸುಗೆಯರಿಯದಂತಿರಬೇಕು!
ಮೆಚ್ಚು ಒಪ್ಪಿತ್ತು ಚೆನ್ನಮಲ್ಲಿಕಾರ್ಜುನಯ್ಯನ ಸ್ನೇಹ!' [೨]

---

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೭೯-ಪುಟ-೬೬ (೧೯೬೬)
೨. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೩೩೬-ಪುಟ-೧೬೧ (೧೯೬೬)

ಇಲ್ಲಿ ಬಳಕೆಯಾಗಿರುವ ಪದಗಳೆಲ್ಲವೂ ಲೈಂಗಿಕ ಪ್ರತಿಮೆ ಎಂದು ನೇರವಾಗಿ ಗೋಚರಿಸುವಂಥದ್ದು. ಮಲ್ಲಿಕಾರ್ಜುನನ ಜೊತೆಗಿನ ಅವಳು ಬಯಸಿದ ಸಮಾಗಮದ ತೀಕ್ಷ್ಣತೆಯನ್ನು ಈ ಪ್ರತಿಮೆ ಜೀವಂತಗೊಳಿಸುತ್ತದೆ. ಮಾನವ ಪ್ರೇಮವೆ ಅತೀತವಾದ ಪರತತ್ವದ ಕಡೆಗೆ ಕೈಚಾಚುವುದಾಗಿದೆ. ಒಬ್ಬ ಹೆಣ್ಣು ಲೌಕಿಕವಾಗಿ ತನ್ನ ಪ್ರಿಯನಿಗೆ ಏನನ್ನು ಅರ್ಪಿಸಿತ್ತಾಳೋ ಹಾಗೆಯೇ ಅಕ್ಕನು ಕೂಡ ದೈವಕ್ಕೆ ಅರ್ಪಿಸಿದ್ದಾಳೆ. ಮಾನಸಿಕವಾಗಿ ದೈಹಿಕವಾಗಿ ಆ ಅನುಭವದ ತೀವ್ರತೆಯನ್ನು ನೀಜವಾಗಿ ಅನುಭವಿಸುವ ರೀತಿ ಇದು. "ಮಚ್ಚು ಅಚ್ಚುಗವಾಗಿ ಒಪ್ಪಿದ ಪರಿ ಎಂಥದು? ಎಚ್ಚರೆಗರಿದೋರದಂತೆ ನಡೆಬೇಕು. ಬಾಣ ನಡುವ ಕ್ರಿಯೆ ಇಲ್ಲಿ ವರ್ಣಿತವಾಗಿದೆ. ಆದರೆ ಗರಿಗಳೂ ಕಾಣದಂತೆ ಅದು ನಡೆಯಬೇಕು. ಇಲ್ಲದಿರುವಂಥದು ಲೈಂಗಿಕ ಸತ್ವವೇ ಆಗಿದೆ ಅಪ್ಪಿದರೆ ಆಸ್ಥಿಗಳು ನುಗ್ಗು ನುರಿಯಾಗಬೇಕು ಎನ್ನುವುದು ನಡಬೇಕು. ಆದ ಮೇಲೆ ಬಂದು ಆಲಿಂಗನದ ತೀಕ್ಷ್ಣತೆ ಎಂಥದು ಎನ್ನುವುದನ್ನು ವ್ಯಂಜಿಸಿತ್ತದೆ. ಬೆಚ್ಚರೆ ಬೆಸುಗೆಯರಿಯದಂತಿರಬೇಕು. ಹೀಗೆ ಇಡೀ ವಚನ ಸಂಭೋಗದ ವರ್ಣನೆಯೆ ಆಗಿದೆ. ನೇರವಾಗಿ ಸಂಭೋಗದ ಚಿತ್ರಣಕೊಡುವ"[೧] ಈ ವಚನ ಆಕೆಗೆ ಆತ ಎಷ್ಟರ ಮಟ್ಟಿಗೆ ವಾಸ್ತವಿಕೆ ಸತ್ಯ ಎನ್ನುವುದನ್ನು ತಿಳಿಸುತ್ತದೆ.

ಚನ್ನಮಲ್ಲಿಕಾರ್ಜುನ ಯಾತರದ ಭಕ್ತರಿಗೆ ಮನಹೋಲಿಯುತ್ತಾನೆಂಬುದಕ್ಕೆ ಈ ಸಾಲುಗಳನ್ನು ಅಕ್ಕನ ಆಲೋಚನ ಲಹರಿಯ ಹಿನ್ನಲೆಯಲ್ಲಿ ಗಮನಿಸಬಹುದು.

'ತನುಕರಗದವರಲ್ಲಿ ಮಜ್ಜನವನೊಲ್ಲೆಯಯ್ಯ ನೀನು
ಮನ ಕರಗದವರಲ್ಲಿ ಪುಷ್ಪವನೊಲ್ಲೆಯಯ್ಯ ನೀನು'[೨]

ಈ ಸಮಾಜ ಕಾಯಕದಲ್ಲಿ ಅಂದರೆ ನಿಷ್ಠೆಯಿಂದ ಮಾಡುವಲ್ಲಿ ಭಗವಂತ ಮಜ್ಜನ, ಪುಷ್ಪವನ್ನ ಸ್ವೀಕರಿಸುತ್ತಾನೆ. ಇಲ್ಲದಿದ್ದರೆ ಅವರ ಮಜ್ಜನ ಪುಷ್ಪ ಅರ್ಪಿತಕ್ಕೆ ಯಾವುದೇ ಸಾರ್ಥಕತೆ ದೊರಕುವುದಿಲ್ಲವೆಂದು ಅಕ್ಕನ ನಿಲುವು, ಅಂದರೆ "ತನುವಿನ ಪೋಷಣೆ ತನುವಿನ ಶ್ರಮದಿಂದಲೇ ಆಗಬೇಕು.' 'ಕಾಯ' ಅಸ್ಥಿತ್ವ ಕಾಯಕದಿಂದಲೇ ಅದು ಪರಿಶುದ್ಧ, ಅಂತಹ ತನು ಕರಿಗಿಸುವವರ ಅಭಿಷೇಕ (ಮಜ್ಜನ) ವನ್ನ ಶಿವ ಸ್ವೀಕರಿಸುತ್ತಾನೆ. ದೈವಕ್ಕೆ ಪುಷ್ಪವನ್ನು ಅರ್ಪಿಸುವ ಚೇತನ ಮೊದಲು ತನ್ನ ಮನವನ್ನ ಪುಷ್ಪದಂತೆ ಸುಗಂಧ ಭರಿತವಾಗಿ ಸುಂದರವಾಗಿ ಮೃದುವಾಗಿ ಕೂಡಿರಬೇಕು ಅಂತ ಮನಕರಗುವ ಚೇತನದ ಪುಷ್ಪವನ್ನ ಸಹ ಶಿವಾ ಸ್ವೀಕರಿಸುತ್ತಾನೆ." (ಲತಾ ಮೈಸೂರು) ಅಂದರೆ ಇಲ್ಲಿ ವ್ಯಕ್ತವಾಗುವ ಸಂವೇದನೆಯೆಂದರೆ ತೋರಿಕೆಯ ಡಾಂಭೀಕ ಭಕ್ತಿಗೆ ಶಿವ ಒಲಿಯುವುದಿಲ್ಲ, ತನು-ಮನ ಕರಗಿಸಿದವರಲ್ಲಿ ಭಗವಂತ ಒಲಿಯುತ್ತಾನೆ. ಅಂತಹ ಭಕ್ತನಿಂದ ಸಮಾಜವು ಆರೋಗ್ಯಕರವಾಗಿರುತ್ತದೆ ಎಂಬುದವರ ಭಾವವನ್ನು ತಿಳಿಯಬಹುದು. ಇದು ಸಮಾಜ ಮತ್ತು ಭಕ್ತಿ ಎರಡರ ನೆಲೆಯಲ್ಲಿ ವ್ಯಕ್ತಗೊಂಡಿದೆ.

---

೧. ಅಕ್ಕಮಹಾದೇವಿ ವಚನಗಳು ಸಾಂಸ್ಕೃತಿಕ ಮುಖಾಮುಖಿ-ಸಂ-ರಹಮತ್ ತರೀಕೆರೆ-ಪುಟ-೧೨೨ (೨೦೦೫)

೨. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೯-ಪುಟ-೮೬ (೧೯೬೬)

'ಕಿಚ್ಚಿಲ್ಲದೆ ಬೇಗೆಯಲಿ ಬೆಂದೆನವ್ವ
ಏರಿಲ್ಲದ ಗಾಯದಲಿ ನೊಂದೆನವ್ವ.' [೧]

ಈ ವಚನವು ಅಕ್ಕನ ವಿರಹ ವೇದನೆಯನ್ನ ವ್ಯಕ್ತಗೊಳಿಸುತ್ತಾ? ಸರ್ವಶಕ್ತನಾದ ಪರಮಾತ್ಮನಲ್ಲಿಟ್ಟ ಮಹಾದೇವಿಯ್ಯಕನ ಭಕ್ತಿ, ಶ್ರದ್ಧೆ, ನಿಷ್ಠೆ, ಶಿವಾನುಭವವನ್ನು ಕೈಗೂಡಿಸಿಕೊಟ್ಟಿದೆ. "ತನ್ನಲ್ಲಿ ಅರಿವು ಸ್ವಯವಾಗಿರಲು ಅನ್ಯರ ಕೇಳಲುಂಟೆ?" ಎಂಬ ಸತ್ಯ ಸ್ವಾನುಭವ ವೇದ್ಯವಾಗಿದೆ. "ಕರುವಿನ ಮೋಹದ ಮರವೆಯನೀಡಾಡಿ" ದ ಮಹಾದೇವಿಯಕ್ಕ ತನ್ನೊಳಡಗಿದ ಚನ್ನಮಲ್ಲಿಕಾರ್ಜನನಲ್ಲಿ ತನ್ನ ತಾನರಿದು ತಾನಾದಡೆ ಚೆನ್ನಮಲ್ಲಿಕಾರ್ಜುನ ತಾನೆ ಬೇರಲ್ಲ. ಎನ್ನುವ ಶಾಶ್ವತ ಸತ್ಯವನ್ನು ಮನೆಗಂಡಿದ್ದಾಳೆ. ಅಂತಯೇ ತನ್ನಲ್ಲಿ ಅಂತರ್ಗತವಾಗಿರುವ ಮಹಾಧನದಲ್ಲಿ ಒಂದುಗೂಡುವ ಮಹದಾಕಾಂಕ್ಷೆ ಮರವಾಗಿದೆ. ಇಷ್ಟ ದೈವಕ್ಕಾಗಿ ಆತ್ಮ ಸಾಕ್ಷತ್ಕಾರಕ್ಕಾಗಿ ಎಂಥ ಕಷ್ಟ ನಿಷ್ಟುರಗನ್ನಾದರೂ ಸಹಿಸಬಲ್ಲ ದೃಢ ನಿಷ್ಠೆ ಗಟ್ಟಿಯಾಗಿದೆ. ಪ್ರಾಪಂಚಿಕ ಸುಖ-ದು:ಖಗಳನ್ನು, ರಾಗ-ದ್ವೇಷಗಳನ್ನು, ಕಾಯಗುಣಗಳನ್ನು ಮೆಟ್ಟಿ ನೀಲ್ಲುವ ಆತ್ಮ ಬಲ ಸಂಮನಿಸಿದೆ. ಅಂತೆಯೇ ಏಕಾಂಗಿಯಾಗಿ ಲೌಕಿ:ಕ ಪ್ರಲೋಭನೆಗಳನ್ನೆಲ್ಲ ಗೆದ್ದು ನಡೆದಿದ್ದಾಳೆ. ವಿರಾಗಿಣಿಯಾದ ಅಕ್ಕನ ಅದ್ಭುತ ವೈರಾಗ್ಯ ಸಿದ್ಧಿ ಆಕೆಯ ಕೆಲವು ವಚನಗಳಲ್ಲಿ ಸ್ಪಷ್ಟವಾಗಿ ವ್ಯಕ್ತವಾಗಿದೆ. ಅಂತರಂಗ, ಬಹಿರಂಗದಲೆಲ್ಲಾ ವೈರಾಗ್ಯ ಭಾವ ವ್ಯಕ್ತಗೊಂಡಿದೆ.

ಹೀಗೆ ಅಕ್ಕನ ಸ್ತ್ರೀಸಂವೇದನೆಯಲ್ಲಿ ಹಲವು ರೀತಿಯ ಸಂವೇದನೆಯನ್ನ ಕಾಣಬಹುದು. ಪ್ರೇಮ, ಕಾಮ, ವೈರಾಗ್ಯ ಇವುಗಳಲ್ಲಿ ಯಾವ ರೀತಿಯಲ್ಲಿ ಅಕ್ಕನ ಸಂವೇದನೆ ವ್ಯಕ್ತಗೊಂಡಿದೆ ಎಂದು ನೋಡಲಾಗಿದೆ.

ಹೀಗಾಗಿ ಅಕ್ಕಮಹಾದೇವಿ ಎಲ್ಲಾ ಕಾಲಕ್ಕೂ ಸಲ್ಲುತ್ತಾಳೆ. ಅವಳ ವಿಚಾರಧಾರೆಗಳು, ಅವಳ ವಚನಗಳು ಆಧುನಿಕ ಮಹಿಳಾ ಸಾಹಿತ್ಯಕ್ಕೂ ಸಲುವವಳು ಎನ್ನಬಹುದು. ಅಕ್ಕಮಹಾದೇವಿ ಎಂದರೆ ಮಹಿಳೆಯರೆಲ್ಲರ ಸ್ವಂತಿಕೆಯ ಪ್ರತೀಕ. ಅಲ್ಲದೆ ಮಹಿಳೆಯಲ್ಲಿನ ತ್ಯಾಗ, ವೈರಾಗ್ಯ. ದಿಟ್ಟತನ, ವಿರೋಧ ಬಂಡಾಯವೇದನೆ, ನಿವೇದನೆ, ಪ್ರೇಮ, ವಿರಹ ಹೀಗೆ ಹಲವು, ಭಾವನೆಗಳ ಅಕ್ಕನ ವಚನಗಳು ಎನ್ನಬಹುದು. ಅಕ್ಕಮಹಾದೇವಿ ಸ್ವಂತಿಕೆಯ ಅನುಭವದ ಮೂಲಕ ಸಮಾಜಕ್ಕೆ ಅಂಟಿಕೊಂಡಿರುವ ದುಷ್ಟ ಸಂಕೋಲೆಯನ್ನ ಬಿಡಿಸಲು ಯತ್ನಿಸಿದ್ದಾಳೆ, ಎನ್ನುವುದು ಅವಳ ವಚನಗಳಿಂದ ತಿಳಿದು ಬರುವ ಸಂವೇದನೆಯ ಮೂಲಕ ಗಮನಿಸಬಹುದು.

೧. ಅಕ್ಕನ ವಚನಗಳು- ಸಂ.ಡಾ.ಎಲ್.ಬಸವರಾಜು-ವ-೬೯-ಪುಟ-೬೩ (೧೯೬೬)

# ಅಧ್ಯಾಯ-೫

## ಉಪಸಂಹಾರ

ಕನ್ನಡ ಸಾಹಿತ್ಯದಲ್ಲಿ ಸಂವೇದನೆಯ ಸ್ವರೂಪವನ್ನ ಈ ರೀತಿಯಲ್ಲಿ ಗುರುತಿಸಿಕೊಳ್ಳಲಾಗಿದೆ. ಯುಗಧರ್ಮಕ್ಕನುಗುಣವಾಗಿ ತಿಗೆ ತಳಲ್ಪಟ್ಟಿದ್ದ ಮಹಿಳೆ, ಅಲ್ಪ ಸಂಖ್ಯಾತರಾದ ಮುಸ್ಲಿಂ ಜನಾಂಗ, ದಲಿತರ ಸಂವೇದನೆಗಳನ್ನು ವಿಮರ್ಶೆ ಮತ್ತು ಸೃತಿಯ ನೆಲೆಯಲ್ಲಿ ಕಂಡುಕೊಳ್ಳಲಾಗಿದೆ. ಅಕ್ಕ ಮಹಾದೇವಿಯ ವಚನಗಳಲ್ಲಿ ಸಂವೇದನೆಯ ಸ್ವರೂಪವನ್ನೆ ಈ ಲೆಯಲ್ಲಿ ಕಾಣಬಹುದು.

ವಚನ ಚಳುವಳಿಯ ಸಾಮಾಜಿಕ, ಧಾರ್ಮಿಕ, ಆಧ್ಯಾತ್ಮಿಕ ಮತ್ತು ವೈಚಾರಿಕ ಚಿಂತನಾ ಕ್ರಮದಿಂದ ಪ್ರಭಾವಿತರಾದ ನಾ ಕಾರ್ತಿಯರ ಕೇಂದ್ರ ಆಸಕ್ತಿ ಆದ್ಯಾತ್ಮ ಸಾಧನೆಯಾಗಿದೆ. ಶರಣ ಸತಿ-ಲಿಂಗ ಪತಿ ಭಾವದ ನೆಲೆಯಲ್ಲಿ ಅಕ್ಕನ ಸ್ತ್ರೀ ೀದನಾ ಸ್ವರೂಪದ ವಚನಗಳಿಂದ ಆಕೆ ಧರ್ಮ, ದೇವರು, ಆತ್ಮ-ಪರಮಾತ್ಮ ಚಿಂತನೆ ಮತ್ತು ತಾತ್ವಿಕ ಸೈದ್ಧಾಂತಿಕ ಪಣೆಗಳು ಅವಳ ವಚನಗಳಲ್ಲಿ ಅಭಿವ್ಯಕ್ತಿ ಪಡೆದಿದೆ. ಅಕ್ಕನ ಜೀವನವೇ ಒಂದು ಕಾವ್ಯಾತ್ಮಕವಾಗಿ ಗೋಚರಿಸುವಂತದ್ದು ರ ಅಂತಃ ಸ್ಮರಣೆಯಿಂದ ಹೊರ ಹೊಮ್ಮುವ ವಚನಗಳಲ್ಲಿ ಸಾಹಿತ್ಯಕ ಸೌಂದರ್ಯ ಕಂಡು ಬರುತ್ತದೆ. ತನ್ನ ಇಷ್ಟ ರಿಗಾಗಿ ಅಕ್ಕ ಪಡುವ ಭವಣೆ ತನ್ನ ಬಾಲ್ಯದಿಂದಲೂ ಶ್ರೀ ಶೈಲ್ಯಕ್ಕೆ ಹೋಗುವ ತನಕ ಅನುಭವಿಸುವ ಏಕಾಂಗಿತನದ ೀರಾಟದಲ್ಲಿ ಭಕ್ತಿ, ಪ್ರೀತಿ, ಪ್ರೇಮ, ಕಾಮ, ವಿರಹದ ನೋವುಗಳು ಅಕ್ಕನ ವಚನದಲ್ಲಿ ಕಾಣಬಹುದು.

ಅಕ್ಕನ ವಚನಗಳಲ್ಲಿ ಕಾವ್ಯ ಶ್ರೀಮಂತಿಕೆಯೂ ಹಾಗೂ ಅನುಭವ ಶ್ರೀಮಂತಿಕೆಯೂ ವ್ಯಕ್ತವಾಗಿದೆ. ವಚನಗಾರ್ತಿಯರಲ್ಲಿ ಷವಾದ ಅಕ್ಕಮಹಾದೇವಿಯ ಸಾಹಿತ್ಯ ಶ್ರೀಮಂತಿಕೆ ಇತರೆ ವಚನಗಾರ್ತಿಯರಿಗಿಂತಲೂ ಮೇಲಾದುದ್ದು ಆದ್ದರಿಂದಲೇ ನಕಾರರಾದ ಅಲ್ಲಮ ಪ್ರಭು, ಬಸವಣ್ಣ, ಸಿದ್ದರಾಮ, ಚನ್ನಬಸಣ್ಣ,ಇವರುಗಳು ಅವಳ ಅನುಭಾವಿಕ ವ್ಯಕ್ತಿತ್ವವನ್ನು ಂತಿಸಿರುವುದು ಹೀಗೆ.

'ಅದ್ಯರ ಅರವರತ್ತು ವಚನಕ್ಕೆ
ದಣ್ಣಾಯಕರ ಇಪ್ಪತ್ತು ವಚನ !
ದಣ್ಣಾಯಕರ ಇಪ್ಪತ್ತು ವಚನಕ್ಕೆ
ಪ್ರಭು ದೇವರ ಹತ್ತು ವಚನ !
ಪ್ರಭು ದೇವರ ಹತ್ತು ವಚನಕ್ಕೆ
ಅಜಗಣ್ಣನ ಐದು ವಚನ
ಅಜಗಣ್ಣನ ಐದು ವಚನಕ್ಕೆ
ಕೂಡಲ ಚನ್ನ ಸಂಗಯ್ಯನಲ್ಲಿ
ಮಹಾದೇವಿಯಕ್ಕೆಗಳ ಒಂದು ವಚನ ನಿರ್ವಚನ
ಕಾಣಾ ಸಿದ್ಧರಾಮಯ್ಯ !' ೧

ನ ವಚನಗಳು - ಸಂ. ಡಾ. ಎಲ್. ಬಸವರಾಜು ವ.೨ ಪುಟ ೪೦

ವ್ಯಕ್ತಿತ್ವಕ್ಕೆ ಹಿರಿತನ ಬರುವುದು ವಯಸ್ಸಿನಿಂದಲ್ಲ ಸುಜ್ಞಾನ, ಸಚ್ಚಾರಿತ್ರಗಳಿಂದ ಮಹಾದೇವಿಯಕ್ಕನ ಘನತೆಯನ್ನು ಬಸವಣ್ಣ ಅಕ್ಕನ ವಚನಗಳ ಭಾವ ಸಂಪತ್ತನ್ನು ಆಕೆಯ ವ್ಯಕ್ತಿತ್ವದ ಅಂತಃ-ಶಕ್ತಿಯನ್ನು ಕುರಿತು ಹೇಳುವ ಮಾತಿನಲ್ಲಿ ಅಕ್ಕನ ಹಿರಿತನವೂ ಅಡಕವಾಗಿರುವುದು ಗೋಚರಿಸುತ್ತದೆ. ಹಾಗೆಯೇ ಬಸವಣ್ಣ ಅಲ್ಲಮರಿಬ್ಬರು ಅಕ್ಕನ ವನ್ನು ಹೊಗಳಿದ್ದಾರೆ.

'ರೂಪಿಲ್ಲದವರಿಗೆ ಒಲಿದವರಿಗೆ ತನುವಿನ ಹಂಗುಂಟೆ

ಮನವಿಲ್ಲದವಗೆ ಮೆಚ್ಚಿದವರಿಗೆ ಅಭಿಮಾನದ ಹಂಗುಂಟೆ' ೨

ಅಕ್ಕಮಹಾದೇವಿ ಕಾಯ, ಜೀವ, ಪ್ರಾಣ, ಮನದ, ಭಾವಗಳನ್ನು ನಿವೃತ್ತಿಗೊಳಿಸಿಕೊಂಡು ಭಾವ ದಿಗಂಬರತ್ವ ಸಿಕೊಂಡವಳು ಎಂದು ಬಸವಣ್ಣ ಅಕ್ಕನ ವ್ಯಕ್ತಿತ್ವ ಕುರಿತು ಹೇಳಿದ್ದಾನೆ. ಹೀಗೆ ಅಲ್ಲಮ ತಮ್ಮ ವಚನಗಳಲ್ಲಿ ಗೌರವಾತ್ಮಕ ನೆಯನ್ನು ಪ್ರಶಂಸೆಯನ್ನು ಅಕ್ಕನ ದಿಟ್ಟತನವನ್ನು ವ್ಯಕ್ತಪಡಿಸಿದ್ದಾನೆ. ಅಕ್ಕಮಹಾದೇವಿ ರೂಪವುಳ್ಳ ಗಂಡನನ್ನು ಬಿಟ್ಟು ಕಿಕದಲ್ಲಿ ರೂಪವಿಲ್ಲದ ಗಂಡನಿಗಾಗಿ ಅವಳು ಅನುಭವಿಸುವ ವೇಧನೆ ಹೇಳತೀರದಂತದ್ದು.

ಅಂತೆಯೆ ಮಹಾದೇವಿಯಕ್ಕನ ಜೀವನದ ಸಂಕೀರ್ಣ ಸಮಸ್ಯೆಗಳೆಂದು ಭಾವಿಸಿದ ಆಕೆಯ ವಿವಾಹ ದಿಗಂಬರತ್ವ ಯ್ಯನ ಪರೀಕ್ಷೆ ಅನುಭವ ಮಂಟಪದಲ್ಲಿ ನಡೆದ ಅಲ್ಲಮಪ್ರಭುವಿನ ತಾತ್ವಿಕ ಪರೀಕ್ಷೆ ಇತ್ಯಾದಿ ಸನ್ನಿವೇಷಗಳು ಾದೇವಿಯಕ್ಕನ ಬದುಕಿನಲ್ಲಿ ಅತೀ ಸಹಜವಾಗಿ ನಡೆದುಹೋಗಿವೆ ಎನಿಸುತ್ತದೆ. ಅಕ್ಕ ಚನ್ನಮಲ್ಲಿಕಾರ್ಜುನನಿಗಾಗಿ ತನ್ನ ಬದುಕನ್ನು ಮುಡಿಪಾಗಿಟ್ಟು ತನ್ನ ಏಕಾಂಗಿತನದ ಹೋರಾಟದಲ್ಲಿ ಯಾವ ಸಂದರ್ಭದಲ್ಲಿಯೂ ತನ್ನ ಯಕ್ಕೆ ಚನ್ನಮಲ್ಲಿಕಾರ್ಜುನನನ್ನು ಎಂದೂ ಕರೆದವಳಲ್ಲ ಇಂತಹ ಗುಣಗಳಿಂದಲೇ ಅಕ್ಕ ಇತರೆ ವಚನಗಾತಿಯರಿಗಿಂತ ಗೆ ವಿಶೇಷವಾಗಿ ವಚನ ಸಾಹಿತ್ಯದಲ್ಲಿ ಕಾಣಿಸಿಕೊಳ್ಳುತ್ತಾಳೆ.

ಅನುಭವ ಮಂಟಪದ ಕಿರಿಯ ಶರಣೆಯರಾದರೂ ಎಲ್ಲಾ ಹಿರಿಯ ಶರಣರಿಂದ ಅಕ್ಕನೆಂಬ ಅಬಿಧಾನ ಪಡೆದಂತಹ ಜ್ಞಾನ ಸಂಪತ್ತು. ಅವಳ ವಚನಗಳಿಂದಲೇ ತಿಳಿದು ಬರುತ್ತದೆ.

ಅಕ್ಕ ಮಹಾದೇವಿಯೂ ತನಗೆ ತೊಚಿದ್ದನ್ನ ತನ್ನ ವಿಚಾರಧಾರೆಗಳನ್ನು ನಿರ್ಭಯವಾಗಿ ತನ್ನ ವಚನಗಳಲ್ಲಿ ಎತ್ತಿ ದ್ದಾಳೆ. ಅಕ್ಕನಲ್ಲಿ ಕಂಡು ಬರುವಂತಹ ಸಾಮಾಜಿಕಸಂವೇದನೆ, ಧಾರ್ಮಿಕಸಂವೇದನೆ ಹಾಗೂ ಸಾಹಿತ್ಯಿಕ ಸಂವೇದನೆಗಳಲ್ಲಿ ಹಾದೇವಿಯ ಕಾವ್ಯ ಶ್ರೀಮಂತಿಕೆಯನ್ನು ಗುರುತಿಸಲಾಗಿದೆ. ಪ್ರಕೃತಿಯೊಳಗೆ ಚನ್ನಮಲ್ಲಿಕಾರ್ಜುನನ ರೂಪ ಸೌಂದರ್ಯವನ್ನ ವಂತಹ ಪರಿ ಅವಳಲ್ಲಿರುವ ಭಕ್ತಿ ಮತ್ತು ಪ್ರೇಮವನ್ನು ವ್ಯಕ್ತಗೊಳಿಸುವುದಾಗಿದೆ. ಆಕೆಯಲ್ಲಿರುವ ಲೋಕಾನುಭವ ಬಹಳ ಸೊಗಸಾಗಿ ಮಿಳಿತವಾಗಿರುವಂತದ್ದು.

ಸತಿ ಪತಿ ಭಾವದಿಂದ ತೀವ್ರವಾಗಿ ಸಂವೇಧನೆಯಲ್ಲಿ ಇದ್ದುದರಿಂದ ಭಾವಗೀತಾತ್ಮಕ ವಚನಗಳನ್ನು ಅಕ್ಕನಲ್ಲಿ ವಂಥದ್ದು. ಭಕ್ತಿ-ಭಾವದ ಸಂವೇದನೆ ಶೃಂಗಾರ ಭಾವವಾಗಿ ರೂಪುಗೊಂಡು ಆದ್ಯಾತ್ಮಿಕ ನೆಲೆಯಲ್ಲಿ ಅವಳ ೀದನೆಯನ್ನುಕಾಣಬಹುದಾಗಿದೆ.

---

ನ ವಚನಗಳು - ಸಂ. ಡಾ. ಎಲ್. ಬಸವರಾಜು ವ.೪ ಪುಟ ೪೮

ಪುರುಷ ಕೇಂದ್ರಿತ ಮೌಲ್ಯ ವ್ಯವಸ್ಥೆಯ ವಿರುದ್ಧ ಅಕ್ಕಮಹಾದೇವಿಯ ನಿರಂತರ ಹೋರಾಟ ಅವಳ ಹೆಣ್ಣುತನದ ಂತ ಚೈತನ್ಯದ ಅಂಶಗಳು ಅವಳ ವಚನಗಳಲ್ಲಿ ಕಾಣಬಹುದು. ಸಮಾಜ ಒಡ್ಡಿದ ಸವಾಲುಗಳನ್ನು ಆತ್ಮ ಶೋಧನೆಗೆ ಮಾಡಿಕೊಂಡು ಇತ್ಯಾತ್ಮಕ ಧೋರಣೆಯಿಂದ ಅವಳು ರಚಿಸಿರುವ ವಚನಗಳು. ಅಕ್ಕನ ವಚನಗಳು ಸಾಹಿತ್ಯಕ್ಕೆ ೀದನೆಯ ಶ್ರೀಮಂತಿಕೆಯನ್ನು ದೊರಕಿಸಿಕೊಟ್ಟಿದೆ ಎಂಬುದು ನನ್ನ ಈ ನಿಬಂಧದಿಂದ ನಾನು ಗುರುತಿಸಿಕೊಂಡಿರುವ ರವಾಗಿದೆ.

## ಪರಾಮರ್ಶನ ಗ್ರಂಥಗಳು


ಕ್ಕನ ವಚನಗಳು – ಸಂಪಾದಕರು
ಡಾ॥ ಎಲ್. ಬಸವರಾಜು
ಗೀತಾ ಬುಕ್ ಹೌಸ್ : ಪ್ರಕಾಶಕರು ಮೈಸೂರು
ಮುದ್ರಣ ವರ್ಷ ೧೯೬೬

ಅಕ್ಕಮಹಾದೇವಿ – ಡಾ॥ ವಿಜಯಶ್ರೀ ಬರೆದ
ಜಗದ್ಗುರು ಶ್ರಿ ಶಿವರಾತ್ರೀಶ್ವರ ಗ್ರಂಥಮಾಲೆ ಮೈಸೂರು
ಮೊದಲ ಮುದ್ರಣ ೨೦೦೨
ಮುದ್ರಣ ವಿನಾಯಕ ಆಫ್ ಸೆಟ್ ಪ್ರಿಂಟರ್ಸ್ ಬೆಂಗಳೂರು.

ಅಕ್ಕಮಹಾದೇವಿ – ಡಾ॥ ಶಾಂತ ಇಮ್ರಾಪೂರ
ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳಿ
ಮೂರು ಸಾವಿರ ಮಠ, ಹುಬ್ಬಳ್ಳಿ
ಪ್ರಕಾಶನದ ವರ್ಷ ೨೦೦೧

ಕ್ಕಮಹಾದೇವಿಯ ವಚನಗಳು – ಸಂಪಾದಕರು
ರಹಮತ್ ತರೀಕೆರೆ
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಮುದ್ರಣ ತ್ವರಿತ ಮುದ್ರಣ ಆಫ್ ಸೆಟ್ ಪ್ರಿಂಟರ್ಸ್, ಗದಗ
ಮುದ್ರಣದ ವರ್ಷ–೨೦೦೩

ಕ್ಕಮಹಾದೇವಿಯವರ ವಚನ ವ್ಯಾಖ್ಯಾನ – ಪರಮ ಪೂಜ್ಯ ಶ್ರೀ ಶ್ರೀ ಶ್ರೀ ಪರಮಗುರು
ಡಾ॥ ವಿಜಯಕುಮಾರ ಮಹಾನುಭವಿಗಳು
ಪ್ರಭು ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್
ಬೆಂಗಳೂರು–೫೬೦೦೧೦
ಪ್ರಥಮ ಮುದ್ರಣ ೧೮ ಏಪ್ರಿಲ್ ೨೦೦೮

ವರು ವಚನಕಾರರು – ಸಿ.ಪಿ.ಕೆ.
ವಾಗ್ದೇವಿ ಪುಸ್ತಕಗಳು
ದೇವರಾಜ ಅರಸು ರಸ್ತೆ, ಮೈಸೂರು–೧
ಮೊದಲ ಮುದ್ರಣ ವರ್ಷ ೧೯೭೯

ನ್ನಡ ಮಹಿಳಾ ಸಾಹಿತ್ಯ ಚರಿತ್ರೆ – ಡಾ॥ ಹೆಚ್.ಎಸ್. ಶ್ರೀಮತಿ
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವರ್ಷ-೨೦೦೬
ಮುದ್ರಣ ವಿನಾಯಕ ಆಫ್ ಸೆಟ್ ಪ್ರಿಂಟರ್ಸ್
ಶ್ರೀನಿವಾಸ ಇಂಡಸ್ಟ್ರಿಯಲ್ ಎಸ್ಟೇಟ್
ಬನ್ನೂರು ಘಟ್ಟ ರಸ್ತೆ ಬೆಂಗಳೂರು-೫೬೦೦೭೬

ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ – ಎಚ್.ಎಸ್. ಮುಕ್ತಾಯ್ಕಕೆ
ಕರ್ನಾಟಕ ಸಾಹಿತ್ಯ ಅಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು-೫೬೦೦೦೨
ಪ್ರಕಾಶಕರು. ಮ.ಗೂ. ಸದಾನಂದಯ್ಯ
ರಿಜಿಸ್ಟಾರ್ ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು-೫೬೦೦೦೨
ಮೊದಲ ಮುದ್ರಣ ೧೯೯೭

ನ್ನಡ ಸಾಹಿತ್ಯ ಚರಿತ್ರೆ – ಡಾ॥ ರಂ.ಶ್ರೀ. ಮುಗಳಿ
ಸಮಾಜಿ ಪುಸ್ತಕಾಲಯ, ಶಿವಾಜಿ ಬೀದಿ
ಧಾರವಾಡ
ಮೊದಲ ಮುದ್ರಣ ೧೯೯೬

ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ – ವಿವಿಧ ಲೇಖಕರು
ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ ಜೆ.ಸಿ.ರಸ್ತೆ ಬೆಂಗಳೂರು-೫೬೦೦೦೨
ಸಂಪಾದಕರ ಸಮಿತಿ ಬರಗೂರು ರಾಮಚಂದ್ರಪ್ಪ (ಪ್ರದಾನ
ಸಂಪಾದಕರು) ಎಚ್.ಎಸ್. ಶಿವಪ್ರಕಾಶ್, ಜಂಬಣ್ಣ
ಅಮರಚಿಂತ ಎಸ್. ಶಿವಾನಂದ, ಸಂಜೂ ಕೌಟ್ಕರ್
ಮೊದಲ ಮುದ್ರಣ ೧೯೯೩

ನಿರ್ವಚನ – ಸಂಪಾದಕರು
ಪ್ರೋ. ಚಂದ್ರಶೇಖರ ಕಂಬಾರ
ವಚನ ಕಮ್ಮಟ ಪರೀಕ್ಷೆ
ಬಸವಕೇಂದ್ರ, ಶ್ರೀ ಮುರುಗಾಮಠ
ಚಿತ್ರದುರ್ಗ-೫೭೭೦೫೨

ಬಂಡಾಯ ಮುಸ್ಲಿಂ ಸಂವೇದನೆ – ಕೆ.ಷರೀಫಾ
ಸಿವಿಜಿ ಪಬ್ಲಿಕೇಷನ್ಸ್
ಬೆಂಗಳೂರು.

ಮಹಿಳಾ ಅಧ್ಯಯನ – ಸಂಪಾದಕರು
ಡಾ॥ ಶಿವಾನಂದ ಎಸ್. ವಿರಕ್ತಮಠ
ಪ್ರಸಾರಂಗ ಹಂಪಿ ವಿಶ್ವವಿದ್ಯಾಲಯ
ಪ್ರಕಟಣೆ ವರ್ಷ ೨೦೦೪

ವಚನ ಧರ್ಮಸಾರ – ಎಂ.ಆರ್. ಶ್ರೀನಿವಾಸಮೂರ್ತಿ
ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ ೧೯೬೬
ಮೊದಲ ಮುದ್ರಣ ೧೯೪೪

ವಚನ ಧರ್ಮಸಾರ – ಎಂ.ಆರ್. ಶ್ರೀನಿವಾಸಮೂರ್ತಿ
ಕನ್ನಡ ಸಾಹಿತ್ಯ ಪರಿಷತ್ತು
ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ,
ಬೆಂಗಳೂರು.
ಮುದ್ರಣ ವರ್ಷ ೨೦೦೩

ವಚನ ಪರಿಭಾಷಾಕೋಶ – ಸಂಪಾದಕರು
(ಸಮಗ್ರ ವಚನ ಸಂಪುಟ 15)
ಡಾ॥ ಎನ್.ಜಿ. ಮಹದೇವಪ್ಪ
ಕರ್ನಾಟಕ ಸರ್ಕಾರ
ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು
ಪ್ರಥಮ ಮುದ್ರಣ ೧೯೯೩

ವಚನಕಾರರು ಮತ್ತು ಶಬ್ದ ಕಲ್ಪ – ಅ.ರಾ.ಮಿತ್ರ

ವಚನ ಸಮಗ್ರ – ಡಾ॥ ಪಿ.ವಿ. ನಾರಾಯಣ
ವಸಂತ ಪ್ರಕಾಶನ
ನಂ ೧೦ ತುಳಸೀವನ
ಬೆಂಗಳೂರು–೫೬೦೦೫೩
ಪ್ರಥಮ ಮುದ್ರಣ ೨೦೦೫

ವಚನ ಸಾಹಿತ್ಯದಲ್ಲಿ ಸ್ತ್ರೀಯರ ಕ್ರಾಂತಿ – ಹೆಚ್.ಡಿ. ಶೋಭಾ
ಕನ್ನಡ ಸಾಹಿತ್ಯ ಪರಿಷತ್ತು
ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ,
ಬೆಂಗಳೂರು.–೫೬೦೦೧೮
ಪ್ರಥಮ ಮುದ್ರಣ ೨೦೦೪

ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ – ಪ್ರದಾನ ಸಂಪಾದಕರು
ಸಂಪುಟ 3 – ಡಾ॥ ಜಿ.ಎಸ್. ಶಿವರುದ್ರಪ್ಪ
ಪ್ರಸಾರಾಂಗ ಜ್ಞಾನ ಭಾರತಿ
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು.
ಮೂರನೇ ಮುದ್ರಣ ೧೯೭೬

ಸಾಹಿತ್ಯ ಲೋಕ – ಎಂ.ಆರ್. ಶ್ರೀನಿವಾಸಮೂರ್ತಿ
ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
ಮೊದಲ ಮುದ್ರಣ ೧೯೭೮

ಸಾಹಿತ್ಯ ವಿಮರ್ಶೆ – ಸಂಪಾದಕರು
ಡಾ॥ ರಹಮತ್ ತರೀಕೆರೆ
ಕರ್ನಾಟಕ ಸಾಹಿತ್ಯ ಅಕಾಡಮಿ
ಬೆಂಗಳೂರು.
ಮೊದಲ ಮುದ್ರಣ ೧೯೯೩

ಶತಮಾನದ ಸಂಶೋಧನೆ – ಎಂ.ಎಂ. ಕಲುಬುರ್ಗಿ
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶಿವ ಶರಣೆಯರ ವಚನ ಸಂಪುಟ – ಸಂಪಾದಕರು
ಡಾ॥ ವೀರಣ್ಣ ರಾಜೂರ
ಕರ್ನಾಟಕ ಸರ್ಕಾರ
ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು.
ಪ್ರಥಮ ಮುದ್ರಣ ೧೯೯೩

